# ಪ್ರಶ್ನೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಅರಾ ಇವ ರಥನಾಭೌ
ಕಲಾ ಯಸ್ಮಿನ್ ಪ್ರತಿಷ್ಠಿತಾಃ ।
ತಂ ವೇದ್ಯಂ ಪುರುಷಂ ವೇದ
ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಪ್ರಶ್ನೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಪ್ರಸ್ತಾವನೆ

ಪ್ರಶ್ನೋಪನಿಷತ್ತು ಮುಂಡಕೋಪನಿಷತ್ತಿನಂತೆಯೇ ಅಥರ್ವವೇದಕ್ಕೆ ಸೇರಿದೆ. ಶ್ರೀಶಂಕರಾಚಾರ್ಯರು ಈ ಉಪನಿಷತ್ತಿನ ಭಾಷ್ಯಾವತರಣಿಕೆಯಲ್ಲಿ ಮುಂಡಕವನ್ನು ಮಂತ್ರವೆಂದೂ ಪ್ರಶ್ನವನ್ನು ಬ್ರಾಹ್ಮಣವೆಂದೂ ಕರೆದಿದ್ದಾರೆ.* ಇದು ಆರು ಪ್ರಶ್ನೆಗಳನ್ನು (ಅಥವಾ ಆರು ಅಧ್ಯಾಯಗಳನ್ನು) ಒಳಗೊಂಡಿದೆ. ಮೊದಲನೆಯ ಮತ್ತು ಕೊನೆಯ ಪ್ರಶ್ನೆಯನ್ನು ಬಿಟ್ಟರೆ ಇತರ ಪ್ರಶ್ನೆಗಳನ್ನು ಪ್ರಶ್ನೆಗಳ ಗುಂಪೆಂದು ಕರೆಯಬಹುದು ಈ ಉಪನಿಷತ್ತು ಪ್ರಶ್ನೋತ್ತರರೂಪವಾಗಿರುವುದರಿಂದ ಇದಕ್ಕೆ ಪ್ರಶ್ನೋಪನಿಷತ್ ಎಂಬ ಹೆಸರು ಬಂದಿದೆ. ಪಿಪ್ಪಲಾದನು ಶಿಷ್ಯರಿಗೆ ಉಪದೇಶ ಮಾಡುವ ಆಚಾರ್ಯ. ಈ ಉಪನಿಷತ್ತಿನಲ್ಲಿ ಶಿಷ್ಯರು ಸೂತ್ರೀಕರಿಸಿರುವ ಪ್ರಶ್ನೆಗಳೆಲ್ಲವೂ ಪ್ರಧಾನವೂ ಮೂಲವೂ ಆಗಿವೆ.

## ಮೊದಲನೆಯ ಪ್ರಶ್ನೆ

ಕಬಂಧೀ ಕಾತ್ಯಾಯನನ ಪ್ರಶ್ನೆ ಅಧ್ಯಾತ್ಮಶಾಸ್ತ್ರದ ಒಂದು ಮುಖ್ಯ ಸಮಸ್ಯೆಯನ್ನು ಮುಂದಿಡುತ್ತದೆ: ಈ ಜಗತ್ತಿಗೆ ಮೂಲಕಾರಣವು ಯಾವುದು? ಪಿಪ್ಪಲಾದನು ಇದಕ್ಕೆ ಉತ್ತರವನ್ನು ಕೊಡುವಾಗ ಸೃಷ್ಟಿಗೆ ಸಂಬಂಧಪಟ್ಟ ಒಂದು ಮುಖ್ಯ ವಿಷಯವನ್ನು ಹೇಳುತ್ತಾನೆ. ಪ್ರಜಾಪತಿಯೇ ಸೃಷ್ಟಿಯ ಮೂಲ ಕಾರಣನು. ಅವನು ಮೊದಲು ರಯಿ–ಪ್ರಾಣ ಎಂಬ ಮಿಥುನವನ್ನು ಸೃಷ್ಟಿಸಿದನು. 'ರಯಿ' ಎಂದರೆ ಅನ್ನಸ್ಥಾನೀಯವಾದ ಚಂದ್ರ ಅಥವಾ ಸೋಮ, ಮೂರ್ತಾಮೂರ್ತರೂಪದಲ್ಲಿರುವ ಸ್ಥೂಲ ಸೂಕ್ಷ್ಮ ಭೌತದ್ರವ್ಯ. 'ಪ್ರಾಣ' ಎಂದರೆ ಭೋಕ್ತೃಸ್ಥಾನೀಯವಾದ ಅಗ್ನಿ ಅಥವಾ ಸೂರ್ಯ. ಮ್ಯಾಕ್ಸ್ ಮುಲ್ಲರ್ ಮೊದಲಾದವರು ಇವೆರಡನ್ನು ಇಂಗ್ಲೀಷಿನಲ್ಲಿ (Matter and Spirit) ಎಂದು ಅನುವಾದಿಸಿರುತ್ತಾರೆ. ಇವೆರಡರ ಸಂಯೋಗದಿಂದ ಜಗತ್ತಿನ ವಿವಿಧ ವಸ್ತುಗಳೆಲ್ಲ ಉತ್ಪತ್ತಿಯನ್ನು ಹೊಂದುವುವು. ಈ ಮಿಥುನ ಕಾರಣನಾದ ಪ್ರಜಾಪತಿಯು ಹಿರಣ್ಯಗರ್ಭನೆಂದು ಶ್ರೀ ಶಂಕರಾಚಾರ್ಯರು

---

* ಮಂತ್ರೋಕ್ತಸ್ಯಾರ್ಥಸ್ಯ ವಿಸ್ತರಾನುವಾದಿ ಇದಂ ಬ್ರಾಹ್ಮಣಂ ಆರಭ್ಯತೇ ।

ಹೇಳಿರುತ್ತಾರೆ; ಇಲ್ಲಿ ಶ್ರುತಿಯು ಜಗತ್ಕಾರಣವನ್ನು ಹೇಳಿರುವುದರಿಂದ ಪ್ರಜಾಪತಿಶಬ್ದವು ಬ್ರಹ್ಮಪರವೆಂದು ರಂಗರಾಮಾನುಜರು ವ್ಯಾಖ್ಯಾನಮಾಡಿರುತ್ತಾರೆ.

## ಎರಡನೆಯ ಪ್ರಶ್ನೆ

ಭಾರ್ಗವ ವೈದರ್ಭಿಯ ಪ್ರಶ್ನೆ ದೇಹದಲ್ಲಿರುವ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಇರುವ ಮುಖ್ಯ ಸಂಬಂಧವನ್ನು ತೋರಿಸಲು ಬಂದಿದೆ. ಮುಖ್ಯಪ್ರಾಣನಿಗೆ ಮಾತ್ರ ಧಾರಕತ್ವ ಪ್ರಕಾಶಕತ್ವ ಶ್ರೇಷ್ಠತ್ವ ಇವೇ ಮೊದಲಾದ ಗುಣಗಳಿವೆಯೆಂದು ತೋರಿಸಲು ಒಂದು ಆಖ್ಯಾಯಿಕೆಯನ್ನು ಹೇಳಿದೆ: ಒಂದು ಸಲ ಶರೀರದ ಆಕಾರವನ್ನು ಹೊಂದಿರುವ ಪಂಚಭೂತಗಳಿಗೂ ಮತ್ತು ಇಂದ್ರಿಯಗಳಿಗೂ ತಮ್ಮ ಆಧಾರದಿಂದಲೇ ಶರೀರವು ನಿಂತಿರುವುದೆಂದು ಅಹಂಕಾರವುಂಟಾಯಿತಂತೆ. ಆಗ ಮುಖ್ಯಪ್ರಾಣನು ತಾನು ಸ್ವಲ್ಪ ಶರೀರವನ್ನು ಬಿಟ್ಟು ಹೊರಗೆ ಬಂದಂತೆ ಮಾಡಿದನು; ಜೇನುಹುಳುಗಳ ರಾಣಿಯು ಮೇಲಕ್ಕೆ ಹಾರಿದಾಗ ಇತರ ಜೇನು ಹುಳುಗಳು ಹಿಂಬಾಲಿಸುವಂತೆ ಸಮಸ್ತ ಇಂದ್ರಿಯಗಳೂ ಪ್ರಾಣನು ಎದ್ದಾಗ ತಾವೂ ಏಳಬೇಕಾಯಿತು, ಪ್ರಾಣನು ನಿಲ್ಲಲು ತಾವೂ ನಿಲ್ಲಬೇಕಾಯಿತು. ಅನಂತರ ಕಾರ್ಯಕರಣರೂಪವಾಗಿರುವ ಭೂತೇಂದ್ರಿಯಗಳು ಪ್ರಾಣನೇ ತಮ್ಮೆಲ್ಲರಿಗಿಂತಲೂ ಶ್ರೇಷ್ಠನು ಎಂದು ತಿಳಿದುಕೊಂಡು ಪ್ರಾಣನನ್ನು ಸ್ತುತಿಸಿದರು. ಈ ಪ್ರಾಣನೇ ಪ್ರಜಾಪತಿ.

## ಮೂರನೆಯ ಪ್ರಶ್ನೆ

ಪ್ರಾಣನ ಉತ್ಪತ್ತಿ-ಸ್ವರೂಪಗಳನ್ನು ನಿರ್ಣಯಿಸಲು ಮೂರನೆಯ ಪ್ರಶ್ನೆ ಬಂದಿದೆ. ಕೌಸಲ್ಯ ಆಶ್ವಲಾಯನನು ಈ ಪ್ರಶ್ನೆಯನ್ನು ಆರು ಭಾಗವಾಗಿ ಪಿಂಗಡಿಸಿದ್ದಾನೆ· ೧. ಪ್ರಾಣನು ಯಾವುದರಿಂದ ಹುಟ್ಟುವನು? ೨. ಈ ಶರೀರಕ್ಕೆ ಹೇಗೆ ಬರುವನು? ೩. ತನ್ನನ್ನು ವಿಭಾಗಿಸಿಕೊಂಡು ಯಾವ ಪ್ರಕಾರದಲ್ಲಿ ಇರುವನು? ೪. ಮರಣಕಾಲದಲ್ಲಿ ಯಾವುದರಿಂದ ಉತ್ಕ್ರಮಿಸುವನು? ೫. ಅವನು ಹೊರಗೆ ಹೇಗಿರುವನು? ೬. ಅವನು ಒಳಗೆ ಹೇಗಿರುವನು? ಇವುಗಳಿಗೆ ಉತ್ತರ: ೧. ಪ್ರಾಣನು ಪರಮಪುರುಷನಿಂದಲೇ ಹುಟ್ಟುತ್ತಾನೆ; ೨. ನೆರಳು ಮನುಷ್ಯನನ್ನು ಅನುಸರಿಸುವಂತೆ ಅವನ ಸಂಕಲ್ಪ ಇಚ್ಛೆ ಮೊದಲಾದುವುಗಳಿಂದ ಉಂಟಾಗುವ ಕರ್ಮವೆಂಬ ನಿಮಿತ್ತದಿಂದ ಶರೀರವನ್ನು

ಪ್ರವೇಶಿಸುತ್ತಾನೆ; ಅಥವಾ ರಂಗರಾಮಾನುಜರು ಹೇಳಿರುವಂತೆ ಪ್ರಾಣನು ಮನಸ್ಸಿನಂತೆ ಯಾವ ಯತ್ನವೂ ಇಲ್ಲದೆ ಪ್ರವೇಶಿಸುತ್ತಾನೆ; ೩. ರಾಜನು ತನ್ನ ಅಧಿಕಾರಿಗಳನ್ನು ಬೇರೆ ಬೇರೆ ಪ್ರದೇಶಗಳಲ್ಲಿ ತನ್ನ ಪರವಾಗಿ ಆಳಲು ನಿಯಮಿಸುವಂತೆ ಮುಖ್ಯಪ್ರಾಣನು ಅಪಾನ-ವ್ಯಾನಾದಿಗಳ ಮೂಲಕ ಶರೀರದ ಕ್ರಿಯೆಯನ್ನು ನಡೆಸುತ್ತಾನೆ. ಪ್ರಾಣಗಳನ್ನು ಕುರಿತ ಶರೀರವಿಜ್ಞಾನವು ಪ್ರಾಚೀನ ಋಷಿಗಳಿಗೆ ತಿಳಿದಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ; ೪. ಹೃದಯದಲ್ಲಿ ನಾವಿರಾರು ನಾಡಿಗಳುಂಟು. ಇವುಗಳಲ್ಲಿ ಒಂದು ನಾಡಿಯಿಂದ ಉದಾನ ವಾಯುವು ಜೀವನನ್ನು ಒಯ್ಯುತ್ತದೆ. ಪುಣ್ಯಮಾಡಿದ್ದರೆ ಪುಣ್ಯಲೋಕಕ್ಕೆ ಹೋಗುವನು, ಪಾಪಮಾಡಿದ್ದರೆ ನರಕಕ್ಕೆ ಹೋಗುವನು; ಪುಣ್ಯಪಾಪಗಳೆರಡೂ ಇದ್ದರೆ ಮನುಷ್ಯಲೋಕದಲ್ಲಿ ಹುಟ್ಟುವನು, ೫. ಪ್ರಾಣನು ಹೊರಗೆ ಆದಿತ್ಯರೂಪದಿಂದ ಇದ್ದುಕೊಂಡು ಚಕ್ಷುವೇ ಮೊದಲಾದ ಇಂದ್ರಿಯಗಳಿಗೆ ಬೆಳಕನ್ನು ಒದಗಿಸುತ್ತಾನೆ ಮೊದಲನೆಯ ಪ್ರಶ್ನೆಯಲ್ಲಿಯೇ ಪ್ರಾಣನೇ ಆದಿತ್ಯನು ಎಂದು ಹೇಳಿರುವುದನ್ನು ನೆನಪಿನಲ್ಲಿಡಬೇಕು. ೬. ಪ್ರಾಣನು ಒಳಗೆ ಹೇಗಿರುವನೆಂಬ ಪ್ರಶ್ನೆಯ ಉತ್ತರವು ಮೂರನೆಯ ಪ್ರಶ್ನೆಯಲ್ಲಿಯೇ ಅಂತರ್ಗತವಾಗಿರುವುದರಿಂದ ಇದಕ್ಕೆ ಬೇರೆ ಉತ್ತರವನ್ನು ಕೊಟ್ಟಿಲ್ಲ

## ನಾಲ್ಕನೆಯ ಪ್ರಶ್ನೆ

ಪುರುಷನ ಸ್ವಪ್ನ ಪ್ರಪಂಚವನ್ನು ಕುರಿತು ಸೌರ್ಯಾಯಣೀ ಗಾರ್ಗ್ಯನು ಪ್ರಶ್ನೆಮಾಡುತ್ತಾನೆ. ವಿಷಯೇಂದ್ರಿಯಗಳ ಸಮೂಹವೆಲ್ಲವೂ ತಮ್ಮ ತಮ್ಮ ವ್ಯಾಪಾರಗಳನ್ನು ತ್ಯಜಿಸಿ ಮನಸ್ಸಿನಲ್ಲಿ ಲಯವಾದಾಗ ಮನುಷ್ಯನು ನಿದ್ರಿಸುತ್ತಾನೆ ಎಂದು ಜನರು ಹೇಳುವರು. ಆಗಲೂ ಕೂಡ ಪ್ರಾಣಾಗ್ನಿಗಳು ಎಚ್ಚತ್ತಿರುವುವು. ಕನಸನ್ನು ನೋಡುವವನು ಜೀವಾತ್ಮನು ಅಥವಾ ಕ್ಷೇತ್ರಜ್ಞ. ಸಮಸ್ತ ಕಾರ್ಯಕರಣಗಳು ಪರಮಾತ್ಮನಲ್ಲಿ ಸೇರಿದಾಗ ಜೀವನು ಕನಸುಗಳನ್ನು ನೋಡುವುದಿಲ್ಲ. ಪಕ್ಷಿಗಳು ಗೂಡನ್ನು ಸೇರುವಂತೆ ಜೀವನೂ ಕೂಡ ಪರಮಾತ್ಮನಲ್ಲಿ ಸೇರಿಕೊಳ್ಳುತ್ತಾನೆ. ಸಮಸ್ತ ನಾಮ-ರೂಪ-ರಸಗಳೆಂಬ ಉಪಾಧಿಗಳಿಂದ ಮುಕ್ತನಾದ ಅಕ್ಷರನನ್ನು ಅರಿತುಕೊಂಡವನು ಸರ್ವಜ್ಞನೂ ಸರ್ವವೂ ಆಗುತ್ತಾನೆ.

## ಐದನೆಯ ಪ್ರಶ್ನೆ

ಮರಣಕಾಲದ ವರೆಗೂ ಓಂಕಾರವನ್ನು ಧ್ಯಾನಿಸುವವನಿಗೆ ಯಾವ ಲೋಕವು ಲಭಿಸುತ್ತದೆ? ಇದು ಶೈಬ್ಯ ಸತ್ಯಕಾಮನ ಪ್ರಶ್ನೆ. ಓಂಕಾರದ ಉಪಾಸನೆಯು ಮೋಕ್ಷದ ಒಂದು ಪ್ರಧಾನ ಸಾಧನ. ಓಂಕಾರವೇ ಪರ ಬ್ರಹ್ಮವೂ ಅಪರಬ್ರಹ್ಮವೂ ಆಗಿದೆ. ಯಾರು ಯಾವ ಜ್ಞಾನದಿಂದ ಉಪಾಸನೆ ಮಾಡುವರೊ ಅವರು ಆ ಫಲವನ್ನು ಪಡೆಯುತ್ತಾರೆ. ಓಂಕಾರಕ್ಕೆ ಮೂರು ಮಾತ್ರೆಗಳುಂಟು. ಒಂದು ಮಾತ್ರೆಯನ್ನು ಧ್ಯಾನಿಸುವವನು ಮನುಷ್ಯಲೋಕದಲ್ಲಿ ಹುಟ್ಟಿ ಬ್ರಹ್ಮಚರ್ಯಾದಿಗಳಿಂದ ಕೂಡಿ ಖ್ಯಾತಿಯನ್ನು ಪಡೆಯುತ್ತಾನೆ. ಎರಡು ಮಾತ್ರೆಗಳನ್ನು ಧ್ಯಾನಿಸುವವನು ಸೋಮಲೋಕವನ್ನು ಪಡೆಯುತ್ತಾನೆ. ಮೂರು ಮಾತ್ರೆಗಳಿಂದ ಕೂಡಿದ ಓಂಕಾರವನ್ನು ಉಪಾಸನೆ ಮಾಡುವವನು ಬ್ರಹ್ಮಲೋಕವನ್ನೇ ಪಡೆಯುತ್ತಾನೆ. ಅಕಾರ ಉಕಾರ ಮಕಾರ ಎಂಬ ಮಾತ್ರೆಗಳನ್ನು ಸರಿಯಾಗಿ ಪ್ರಯೋಗಿಸದಿದ್ದರೆ ಅವು ಫಲ ಕಾರಿಯಾಗುವುದಿಲ್ಲ.

ರಂಗರಾಮಾನುಜರ ವ್ಯಾಖ್ಯಾನದ ಪ್ರಕಾರ ಇಲ್ಲಿ 'ಮಾತ್ರೆ' ಎಂದರೆ ಅ ಉ ಮ ಎಂಬ ಮೂರು ಅಕ್ಷರಗಳಲ್ಲ; ಏಕೆಂದರೆ ಓಂಕಾರವನ್ನು ಹೀಗೆ ಒಡೆಯಕೂಡದು. ಇಲ್ಲಿ ಮಾತ್ರೆಯು ಕ್ಷಣವನ್ನು (ಎಂದರೆ ಕಾಲವನ್ನು) ಸೂಚಿಸುತ್ತದೆ. 'ಒಂದು ಮಾತ್ರೆಯನ್ನು ಧ್ಯಾನಿಸುವುದು' ಎಂದರೆ ಅಪರ ಬ್ರಹ್ಮವಾಚಕವಾದ ಹ್ರಸ್ವಪ್ರಣವದಿಂದ ಅಪರಬ್ರಹ್ಮವನ್ನು ಧ್ಯಾನಿಸುವುದು ಎಂದರ್ಥ. ಎರಡು ಮಾತ್ರೆಗಳ ಪ್ರಣವಧ್ಯಾನವೂ ಕೂಡ ಅಪರಬ್ರಹ್ಮಕ್ಕೆ ಸೇರಿದ್ದು. ಆದರೆ ಮೂರು ಮಾತ್ರೆಗಳಿಂದ ಕೂಡಿದ ಪ್ರಣವವು ಪರಬ್ರಹ್ಮ ವಾಚಕವಾದದ್ದು. ಈ ಮೂರು ಮಾತ್ರೆಗಳ ಪ್ರಯೋಗವನ್ನು ಸರಿಯಾಗಿ ತಿಳಿದಿದ್ದರೆ ಫಲವುಂಟಾಗುವುದು. ದ್ರುತವಾಗಿ ಅಥವಾ ವಿಳಂಬವಾಗಿ ಉಚ್ಚರಿಸಿದರೆ ಅದು ಮೃತ್ಯುಪ್ರದವಾಗುವುದು.

## ಆರನೆಯ ಪ್ರಶ್ನೆ

ಹದಿನಾರು ಕಲೆಗಳಿಂದ ಕೂಡಿದ ಪುರುಷನು ಯಾರು? ಅವನೆಲ್ಲಿರುವನು? ಇದು ಸುಕೇಶ ಭಾರದ್ವಾಜನ ಪ್ರಶ್ನೆ. ಈ ಪುರುಷನು ಹೃದಯ

ದಲ್ಲಿಯೇ ಇದ್ದಾನೆ. ಪ್ರಾಣ, ಶ್ರದ್ಧೆ, ಆಕಾಶ, ವಾಯು, ಜ್ಯೋತಿ, ನೀರು, ಪೃಥ್ವಿ, ಇಂದ್ರಿಯ, ಮನಸ್ಸು, ಅನ್ನ, ವೀರ್ಯ, ತಪಸ್ಸು, ಮಂತ್ರಗಳು, ಕರ್ಮ, ಲೋಕಗಳು ಮತ್ತು ನಾಮ ಇವೇ ಪುರುಷನ ಹದಿನಾರು ಕಲೆಗಳು. ನದಿಗಳು ಸಮುದ್ರವನ್ನು ಸೇರಿದ ಮೇಲೆ ತಮ್ಮ ನಾಮರೂಪಗಳನ್ನು ತೊಲಗಿಸಿಕೊಂಡು ಸಮುದ್ರವೆಂದು ಹೇಳಲ್ಪಡುವಂತೆ, ಈ ಕಲೆಗಳು ಪುರುಷನನ್ನು ಹೊಂದಿದ ಮೇಲೆ ನಾಮರೂಪಗಳನ್ನು ಬಿಡುವುವು. ಸಕಲನಾದ ಪುರುಷನು ನಿಷ್ಕಲನೂ ಅಮೃತನೂ ಆಗುವನು. ಇವನೇ ಪರಬ್ರಹ್ಮ ಅಥವಾ ಪರಮ ಪುರುಷ.

ಈ ಪುಸ್ತಕದ ಪೂರ್ವಭಾಗದಲ್ಲಿ ಮೂಲದೊಂದಿಗೆ ಶಾಂಕರಭಾಷ್ಯಾನುಸಾರವಾಗಿ ಪ್ರತಿಪದಾರ್ಥ-ತಾತ್ಪರ್ಯ-ಟಿಪ್ಪಣಿಗಳನ್ನು ಕೊಟ್ಟು ಉತ್ತರಭಾಗದಲ್ಲಿ ರಂಗರಾಮಾನುಜಯತಿಗಳ ವ್ಯಾಖ್ಯಾನುಸಾರವಾಗಿ ತಾತ್ಪರ್ಯ ಟಿಪ್ಪಣಿಗಳನ್ನು ಕೊಟ್ಟಿದೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು

ಸ್ವಾಮಿ ಆದಿದೇವಾನಂದ

# ಶಾಂತಿಪಾಠ

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿ-
ರ್ವ್ಯಶೇಮ ದೇವಹಿತಂ ಯದಾಯುಃ ॥

ಓಂ ಶಾಂತಿಃ ಶಾಂತಿಃ ಶಾಂತಿಃ

**ದೇವಾಃ** = ಹೇ ದೇವತೆಗಳೆ, **ಕರ್ಣೇಭಿಃ** = ಕಿವಿಗಳಿಂದ **ಭದ್ರಂ** = ಮಂಗಳಕರವಾದುದನ್ನು **ಶೃಣುಯಾಮ** = ಕೇಳುವ; **ಯಜತ್ರಾಃ** = ಹೇ ಪೂಜಾರ್ಹರೆ, **ಅಕ್ಷಭಿಃ** = ಕಣ್ಣುಗಳಿಂದ **ಭದ್ರಂ** = ಪವಿತ್ರವಾದುದನ್ನು **ಪಶ್ಯೇಮ** = ನೋಡುವ; **ಸ್ಥಿರೈಃ** = ದೃಢವಾದ **ಅಂಗೈಃ** = ಅವಯವಗಳಿಂದ [ಚ = ಮತ್ತು] **ತನೂಭಿಃ** = ಶರೀರಗಳಿಂದ [**ಯುಕ್ತಾಃ ವಯಂ** = ಕೂಡಿದ ನಾವು] **ತುಷ್ಟುವಾಂಸಃ** = ಸ್ತುತಿಸುವವರಾಗಿ **ದೇವಹಿತಂ ಯತ್ ಆಯುಃ** = ದೇವನಿಂದ ಯಾವ ಆಯುಸ್ಸು ವಿಧಿಸಲ್ಪಟ್ಟಿದೆಯೊ [**ತತ್** = ಅದನ್ನು] **ವ್ಯಶೇಮ** = ಹೊಂದುವ.

ಹೇ ದೇವತೆಗಳೆ, ಮಂಗಳವಾದುದನ್ನು ಕಿವಿಗಳಿಂದ ಕೇಳುವ; ಹೇ ಪೂಜಾರ್ಹರೆ, ಪವಿತ್ರವಾದುದನ್ನು ಕಣ್ಣುಗಳಿಂದ ನೋಡುವ; ದೃಢವಾದ ಅವಯವಗಳಿಂದಲೂ ಮತ್ತು ಶರೀರಗಳಿಂದಲೂ ಕೂಡಿ, (ನಿಮ್ಮನ್ನು) ಸ್ತುತಿಸುವವರಾಗಿ ದೇವನಿಂದ ವಿಧಿಸಲ್ಪಟ್ಟ (ಪೂರ್ಣವಾದ) ಆಯುಸ್ಸನ್ನು ಹೊಂದುವ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಪ್ರಶ್ನೋಪನಿಷತ್

## ಮೊದಲನೆಯ ಪ್ರಶ್ನೆ

**ಸುಕೇಶಾ ಚ ಭಾರದ್ವಾಜಃ, ಶೈಬ್ಯಶ್ಚ ಸತ್ಯಕಾಮಃ, ಸೌರ್ಯಾಯಣೀ ಚ ಗಾರ್ಗ್ಯಃ, ಕೌಸಲ್ಯಶ್ಚಾಶ್ವಲಾಯನೋ, ಭಾರ್ಗವೋ ವೈದರ್ಭಿಃ, ಕಬಂಧೀ ಕಾತ್ಯಾಯನಸ್ತೇ ಹೈತೇ ಬ್ರಹ್ಮಪರಾ ಬ್ರಹ್ಮನಿಷ್ಠಾಃ ಪರಂ ಬ್ರಹ್ಮಾನ್ವೇಷಮಾಣಾ ಏಷ ಹ ವೈ ತತ್ಸರ್ವಂ ವಕ್ಷ್ಯತೀತಿ ತೇ ಹ ಸಮಿತ್ಪಾಣಯೋ ಭಗವಂತಂ ಪಿಪ್ಪಲಾದಮುಪಸನ್ನಾಃ ॥ ೧ ॥**

**ಭಾರದ್ವಾಜಃ** = ಭರದ್ವಾಜನ ಮಗನಾದ **ಸುಕೇಶಾ ಚ** = ಸುಕೇಶನು, **ಶೈಬ್ಯಃ ಸತ್ಯಕಾಮಃ ಚ** = ಶಿಬಿಯ ಮಗನಾದ ಸತ್ಯಕಾಮನು, **ಸೌರ್ಯಾಯಣೀ ಗಾರ್ಗ್ಯಃ ಚ**=ಗರ್ಗಗೋತ್ರದ ಸೌರ್ಯಾಯಣಿಯು, **ಕೌಸಲ್ಯಃ ಆಶ್ವಲಾಯನಃ ಚ** = ಅಶ್ವಲನ ಮಗನಾದ ಕೌಸಲ್ಯನು, **ವೈದರ್ಭಿಃ ಭಾರ್ಗವಃ** = ವಿದರ್ಭದೇಶದ ಭಾರ್ಗವನು, **ಕಾತ್ಯಾಯನಃ ಕಬಂಧೀ** = ಕತ್ಯನ ಮಗನಾದ ಕಬಂಧಿಯು **ತೇ ಹ ಏತೇ** = ಆ ಇವರು **ಬ್ರಹ್ಮಪರಾಃ** = ಬ್ರಹ್ಮಪರರಾಗಿ **ಬ್ರಹ್ಮನಿಷ್ಠಾಃ** = ಬ್ರಹ್ಮನಿಷ್ಠರಾಗಿ [ಇದ್ದರು]. **ತೇ** = ಅವರು **ಪರಂ ಬ್ರಹ್ಮ** = ಪರಬ್ರಹ್ಮವನ್ನು **ಅನ್ವೇಷಮಾಣಾಃ** = ಅನ್ವೇಷಿಸುವವರಾಗಿ **ಏಷಃ** = ಇವನೇ **ಹ ವೈ** = ನಿಶ್ಚಯವಾಗಿ **ತತ್ ಸರ್ವಂ** = ಅದೆಲ್ಲವನ್ನೂ **ವಕ್ಷ್ಯತಿ** = ಹೇಳುವನು **ಇತಿ** = ಎಂದು **ಸಮಿತ್ಪಾಣಯಃ** = ಸಮಿತ್ಪಾಣಿಗಳಾಗಿ **ಭಗವಂತಂ ಪಿಪ್ಪಲಾದಂ** = ಭಗವಂತನಾದ ಪಿಪ್ಪಲಾದನ ಬಳಿಗೆ **ಉಪಸನ್ನಾಃ** = ಬಂದರು.

೧. ಭರದ್ವಾಜನ ಮಗನಾದ ಸುಕೇಶ, ಶಿಬಿಯ ಮಗನಾದ ಸತ್ಯಕಾಮ, ಗರ್ಗಗೋತ್ರದ ಸೌರ್ಯಾಯಣಿ,[೧] ಅಶ್ವಲನ ಮಗನಾದ ಕೌಸಲ್ಯ, ವಿದರ್ಭದೇಶದ ಭಾರ್ಗವ[೨] ಮತ್ತು ಕತ್ಯನ ಮಗನಾದ ಕಬಂಧಿ—ಆ ಇವರು ಬ್ರಹ್ಮಪರರೂ[೩] ಬ್ರಹ್ಮನಿಷ್ಠರೂ[೪] ಆಗಿದ್ದರು. ಅವರು ಪರಬ್ರಹ್ಮವನ್ನು ಅನ್ವೇಷಿಸುವವರಾಗಿ,[೫] 'ಇವನೇ ನಿಶ್ಚಯವಾಗಿ ಅದೆಲ್ಲವನ್ನೂ ಹೇಳುವನು' ಎಂದು (ಯೋಚಿಸಿ) ಭಗವಂತನಾದ ಪಿಪ್ಪಲಾದನ ಬಳಿಗೆ ಬಂದರು.

[೧ ಸೂರ್ಯನ ಮಗ ಸೌರ್ಯ, ಸೌರ್ಯನ ಮಗ ಸೌರ್ಯಾಯಣಿ.
೨ ಭೃಗುಗೋತ್ರದಲ್ಲಿ ಹುಟ್ಟಿದವನು.
೩ ಅಪರಬ್ರಹ್ಮವನ್ನು ಪರವೆಂದು ತಿಳಿದವರು.
೪ ಅಪರಬ್ರಹ್ಮದ ಅನುಷ್ಠಾನದಲ್ಲಿಯೇ ನಿಷ್ಠೆಯುಳ್ಳವರು.
೫ ಯಾವುದು ನಿತ್ಯವಾದ ಜ್ಞೇಯವೊ ಅದು ಯಾವುದು ಎಂದು.]

**ತಾನ್ ಹ ಸ ಋಷಿರುವಾಚ—ಭೂಯ ಏವ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥ; ಯಥಾಕಾಮಂ ಪ್ರಶ್ನಾನ್ ಪೃಚ್ಛತ; ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋ ವಕ್ಷ್ಯಾಮ ಇತಿ ॥ ೨ ॥**

**ಸಃ ಋಷಿಃ** = ಆ ಋಷಿಯು **ತಾನ್** = ಅವರನ್ನು ಕುರಿತು **ಉವಾಚ ಹ** = ಹೇಳಿದನು— **ಭೂಯಃ ಏವ** = ಇನ್ನೂ **ತಪಸಾ** = ತಪಸ್ಸಿನಿಂದಲೂ **ಬ್ರಹ್ಮಚರ್ಯೇಣ**=ಬ್ರಹ್ಮಚರ್ಯದಿಂದಲೂ **ಶ್ರದ್ಧಯಾ**=ಶ್ರದ್ಧೆಯಿಂದಲೂ **ಸಂವತ್ಸರಂ**= ಒಂದು ವರ್ಷ **ಸಂವತ್ಸ್ಯಥ**=ವಾಸಮಾಡಿರಿ; [ತತಃ = ಆ ಮೇಲೆ] **ಯಥಾಕಾಮಂ**= ಇಚ್ಛಾನುಸಾರ **ಪ್ರಶ್ನಾನ್** = ಪ್ರಶ್ನೆಗಳನ್ನು **ಪೃಚ್ಛತ** = ಕೇಳಿರಿ; **ಯದಿ ವಿಜ್ಞಾಸ್ಯಾಮಃ**=ನಮಗೆ ತಿಳಿದಿದ್ದರೆ **ಸರ್ವಂ ಹ** = ಎಲ್ಲವನ್ನೂ **ವಃ**=ನಿಮಗೆ **ವಕ್ಷ್ಯಾಮಃ**= ಹೇಳುವೆವು **ಇತಿ** = ಎಂದು.

೨. 'ಇನ್ನೂ[೧] ಒಂದು ವರ್ಷ ತಪಸ್ಸಿನಿಂದಲೂ[೨] ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ[೩] ವಾಸಮಾಡಿರಿ;[೪] (ಆ ಮೇಲೆ) ಇಚ್ಛಾನುಸಾರ ಪ್ರಶ್ನೆಗಳನ್ನು ಕೇಳಿರಿ; ನಮಗೆ ತಿಳಿದಿದ್ದರೆ[೫] ಎಲ್ಲವನ್ನೂ ನಿಮಗೆ ಹೇಳುವೆವು' ಎಂದು ಆ ಋಷಿಯು ಅವರಿಗೆ ಹೇಳಿದನು

[೧ ಅವರು ಮೊದಲೇ ತಪಸ್ವಿಗಳಾಗಿದ್ದರೂ.
೨ ಇಂದ್ರಿಯಸಂಯಮವೆಂಬ ತಪಸ್ಸಿನಿಂದಲೂ.
೩ ಆಸ್ತಿಕ್ಯಬುದ್ಧಿಯಿಂದಲೂ.
೪ ಚೆನ್ನಾಗಿ ಗುರುಶುಶ್ರೂಷೆಯಲ್ಲಿಯೇ ತತ್ಪರರಾಗಿ.
೫ ಆಚಾರ್ಯನಿಗೆ ತತ್ತ್ವವು ತಿಳಿದಿಲ್ಲ ಎಂದು ಅರ್ಥವಲ್ಲ, ತನಗೆ ಗರ್ವವಿಲ್ಲ ಎಂದು ತೋರಿಸುವುದಕ್ಕಾಗಿ.]

**ಅಥ ಕಬಂಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ—ಭಗವನ್ ಕುತೋ ಹ ವಾ ಇಮಾಃ ಪ್ರಜಾಃ ಪ್ರಜಾಯಂತ ಇತಿ ॥ ೩ ॥**

**ಅಥ** = ಅನಂತರ **ಕಬಂಧೀ ಕಾತ್ಯಾಯನಃ** = ಕಬಂಧೀ ಕಾತ್ಯಾಯನನು **ಉಪೇತ್ಯ** = ಸಮೀಪಕ್ಕೆ ಬಂದು **ಪಪ್ರಚ್ಛ** = ಕೇಳಿದನು: **ಭಗವನ್** = ಭಗವಂತನೆ **ಕುತಃ ಹ ವೈ** = ಎಲ್ಲಿಂದ **ಇಮಾಃ ಪ್ರಜಾಃ** = ಈ ಪ್ರಜೆಗಳು **ಪ್ರಜಾಯಂತೇ** = ಹುಟ್ಟುತ್ತಾರೆ? **ಇತಿ** = ಎಂದು.

೩. ಅನಂತರ[೧] ಕಬಂಧೀ ಕಾತ್ಯಾಯನನು (ಆಚಾರ್ಯನ) ಸಮೀಪಕ್ಕೆ ಬಂದು ಕೇಳಿದನು: 'ಹೇ ಭಗವಂತನೆ, ಈ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?'

[[೧] ಒಂದು ವರ್ಷವು ಕಳೆದ ಮೇಲೆ.]

**ತಸ್ಮೈ ಸ ಹೋವಾಚ—ಪ್ರಜಾಕಾಮೋ ವೈ ಪ್ರಜಾಪತಿಃ ಸ ತಪೋಽತಪ್ಯತ; ಸ ತಪಸ್ತಪ್ತ್ವಾ ಸ ಮಿಥುನಮುತ್ಪಾದಯತೇ, ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ ॥ ೪ ॥**

**ಸಃ** = ಅವನು [ಪಿಪ್ಪಲಾದನು] **ತಸ್ಮೈ** = ಅವನಿಗೆ **ಉವಾಚ ಹ** = ಹೇಳಿದನು: **ಸಃ ವೈ ಪ್ರಜಾಪತಿಃ** = ಆ ಪ್ರಜಾಪತಿಯು **ಪ್ರಜಾಕಾಮಃ [ಸನ್]** = ಪ್ರಜಾಕಾಮನಾಗಿ **ತಪಃ ಅತಪ್ಯತ** = ತಪಸ್ಸು ಮಾಡಿದನು; **ಸಃ** = ಅವನು **ತಪಃ ತಪ್ತ್ವಾ** = ತಪಸ್ಸನ್ನು ಮಾಡಿ, **ಏತೌ** = ಇವು **ಮೇ** = ನನಗೆ **ಪ್ರಜಾಃ** = ಪ್ರಜೆಗಳನ್ನು **ಬಹುಧಾ** = ಬಹುವಾಗಿ **ಕರಿಷ್ಯತಃ** = ಉಂಟುಮಾಡುವುವು **ಇತಿ** = ಎಂದು **ಸಃ** = ಅವನು **ರಯಿಂ ಚ ಪ್ರಾಣಂ ಚ** = ರಯಿ ಮತ್ತು ಪ್ರಾಣ ಎಂಬ **ಮಿಥುನಂ** = ಜೋಡಿಯನ್ನು **ಉತ್ಪಾದಯತೇ** = ಉಂಟುಮಾಡುತ್ತಾನೆ.

೪. ಪಿಪ್ಪಲಾದನು ಅವನಿಗೆ ಹೇಳಿದನು: ಆ ಪ್ರಜಾಪತಿಯು[೧] ಪ್ರಜಾಕಾಮನಾಗಿ ತಪಸ್ಸುಮಾಡಿದನು;[೨] ಅವನು ತಪಸ್ಸುಮಾಡಿದ ಮೇಲೆ, 'ಇವು ನನಗೆ ಬಹುವಾಗಿ ಪ್ರಜೆಗಳನ್ನು ಉಂಟುಮಾಡುವುವು' ಎಂದು ಯೋಚಿಸಿ ರಯಿ ಪ್ರಾಣ ಎಂಬ ಜೋಡಿಯನ್ನು[೩] ಸೃಷ್ಟಿಮಾಡುತ್ತಾನೆ

[[೧] ಕಲ್ಪಾದಿಯಲ್ಲಿ ಆಗಿರುವ ಹಿರಣ್ಯಗರ್ಭ.

[೨] ಜನ್ಮಾಂತರದಲ್ಲಿ ಭಾವಿಸಿಕೊಂಡ ಜ್ಞಾನವೆಂಬ ತಪಸ್ಸು.

[೩] ರಯಿ ಎಂದರೆ ಅನ್ನಸ್ಥಾನೀಯವಾದ ಸೋಮ ಅಥವಾ ಚಂದ್ರ, ಪ್ರಾಣ ಎಂದರೆ ಭೋಕ್ತೃಸ್ಥಾನೀಯವಾದ ಅಗ್ನಿ ಅಥವಾ ಸೂರ್ಯ; ಮ್ಯಾಕ್ಸ್ ಮುಲ್ಲರ್ ಮೊದಲಾದವರು ಇವೆರಡನ್ನೂ ಇಂಗ್ಲೀಷಿನಲ್ಲಿ (Matter and Spirit) ಎಂದು ಅನುವಾದ ಮಾಡಿರುತ್ತಾರೆ. ಇವೆರಡರ ಸಂಯೋಗದಿಂದಲ್ಲವೆ ಇಡಿಯ ಜಗತ್ತಿನ ವಿವಿಧ ವಸ್ತು

ಗಳೆಲ್ಲ ಸೃಷ್ಟಿಯಾಗುವುದು? ಅಂಡೋತ್ಪತ್ತಿಕ್ರಮದಿಂದ ಸೂರ್ಯಚಂದ್ರರನ್ನು ಸೃಷ್ಟಿಸಿದನು ಎಂದರ್ಥ.]

**ಆದಿತ್ಯೋ ಹ ವೈ ಪ್ರಾಣೋ, ರಯಿರೇವ ಚಂದ್ರಮಾ, ರಯಿರ್ವಾ ಏತತ್ ಸರ್ವಂ ಯನ್ಮೂರ್ತಂ ಚಾಮೂರ್ತಂ ಚ; ತಸ್ಮಾನ್ಮೂರ್ತಿರೇವ ರಯಿಃ ॥ ೫ ॥**

**ಆದಿತ್ಯಃ ಹ ವೈ** = ಆದಿತ್ಯನೇ **ಪ್ರಾಣಃ** = ಪ್ರಾಣ, **ಚಂದ್ರಮಾ ಏವ** = ಚಂದ್ರನೇ **ರಯಿಃ** = ರಯಿ, **ವಾ** = ಅಥವಾ **ಯತ್** = ಯಾವುದು **ಮೂರ್ತಂ ಚ ಅಮೂರ್ತಂ ಚ** = ಮೂರ್ತವೂ ಮತ್ತು ಅಮೂರ್ತವೂ **ಏತತ್ ಸರ್ವಂ** = ಇದೆಲ್ಲವೂ **ರಯಿಃ** = ರಯಿ. **ತಸ್ಮಾತ್** = ಅಮೂರ್ತಕ್ಕಿಂತ [ಭಿನ್ನವಾದ] **ಮೂರ್ತಿಃ ಏವ** = ಮೂರ್ತವೇ **ರಯಿಃ** = ರಯಿ.

**೫.** ಆದಿತ್ಯನೇ ಪ್ರಾಣ, ಚಂದ್ರನೇ ರಯಿ;[೧] ಅಥವಾ ಮೂರ್ತ ಮತ್ತು ಅಮೂರ್ತ—ಇದೆಲ್ಲವೂ ರಯಿ.[೨] ಅಮೂರ್ತಕ್ಕಿಂತ (ಭಿನ್ನವಾದ) ಮೂರ್ತವೇ ರಯಿ.[೩]

[[೧] ಪ್ರಜಾಪತಿಯೇ ಅತ್ತೃವೂ (ತಿನ್ನುವವನೂ) ಅನ್ನವೂ ಆಗಿರುವನು. ಗುಣಪ್ರಧಾನದೃಷ್ಟಿಯಿಂದ ಭೇದ ಉಂಟಾಗಿದೆ.

[೨] ಮೂರ್ತ ಎಂದರೆ ಸ್ಥೂಲರೂಪವಿರುವ ವಸ್ತು, ಅಮೂರ್ತವೆಂದರೆ ಸೂಕ್ಷ್ಮರೂಪವಿರುವ ವಸ್ತು. ಜಗತ್ತಿನಲ್ಲಿರುವ ಸಮಸ್ತ ಸ್ಥೂಲಸೂಕ್ಷ್ಮವಸ್ತುಗಳೂ—ದೃಗ್ಗೋಚರವಾದ ವಸ್ತುವಿನಿಂದ ಹಿಡಿದು ಸೂಕ್ಷ್ಮಪರಿಮಾಣದ ಪರಮಾಣುವಿನವರೆಗೆ—ಎಲ್ಲವೂ ರಯಿ ಅಥವಾ ಭೌತದ್ರವ್ಯ. ಭೌತದ್ರವ್ಯವೇ ಸ್ಥೂಲಸೂಕ್ಷ್ಮರೂಪವನ್ನು ಹೊಂದುತ್ತದೆ. ಈ ದೃಷ್ಟಿಯಿಂದ 'matter' ಎಂಬುದಕ್ಕೂ 'energy' ಎಂಬುದಕ್ಕೂ ಯಾವ ಭೇದವೂ ಇಲ್ಲ.

[೩] ವ್ಯವಹಾರದೃಷ್ಟಿಯಿಂದ ಸ್ಥೂಲವಾದ ಮೂರ್ತವೇ ರಯಿಯಾಗಿ ಸೂಕ್ಷ್ಮವಾದ ಅಮೃತದಿಂದ ಭೋಗಿಸಲ್ಪಡುತ್ತದೆ.]

**ಅಥಾದಿತ್ಯ ಉದಯನ್ ಯತ್ ಪ್ರಾಚೀಂ ದಿಶಂ ಪ್ರವಿಶತಿ, ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ । ಯದ್ದಕ್ಷಿಣಾಂ ಯತ್ ಪ್ರತೀಚೀಂ ಯದುದೀಚೀಂ ಯದಧೋ ಯದೂರ್ಧ್ವಂ ಯದಂತರಾ ದಿಶೋ, ಯತ್ಸರ್ವಂ ಪ್ರಕಾಶಯತಿ, ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ ॥ ೬ ॥**

**ಅಥ** = ಈಗ **ಆದಿತ್ಯಃ** = ಆದಿತ್ಯನು **ಉದಯನ್** = ಉದಯಿಸುತ್ತ **ಯತ್** = ಯಾವಾಗ **ಪ್ರಾಚೀಂ ದಿಶಂ** = ಪೂರ್ವ ದಿಕ್ಕನ್ನು **ಪ್ರವಿಶತಿ** = ಪ್ರವೇಶಿಸುವನೊ [ತದಾ = ಆಗ] **ತೇನ** = ತನ್ನ ವ್ಯಾಪ್ತಿಯಿಂದ **ಪ್ರಾಚ್ಯಾನ್** = ಪೂರ್ವದಲ್ಲಿರುವವುಗಳಾದ **ಪ್ರಾಣಾನ್** = ಪ್ರಾಣಗಳನ್ನು **ರಶ್ಮಿಷು** = ರಶ್ಮಿಗಳಲ್ಲಿ **ಸಂನಿಧತ್ತೇ** = ಸೇರಿಸಿಕೊಳ್ಳುತ್ತಾನೆ; **ಯತ್ ದಕ್ಷಿಣಾಂ**=ಯಾವಾಗ ದಕ್ಷಿಣವನ್ನು, **ಯತ್ ಪ್ರತೀಚೀಂ**= ಯಾವಾಗ ಪಶ್ಚಿಮವನ್ನು, **ಯತ್ ಉದೀಚೀಂ** = ಯಾವಾಗ ಉತ್ತರವನ್ನು, **ಯತ್ ಅಧಃ** = ಯಾವಾಗ ಕೆಳಗಡೆಯನ್ನು, **ಯತ್ ಊರ್ಧ್ವಂ** = ಯಾವಾಗ ಮೇಲ್ಗಡೆಯನ್ನು, **ಯತ್ ಅಂತರಾಃ ದಿಶಃ** = ಯಾವಾಗ ಅಂತರದಿಕ್ಕುಗಳನ್ನು, **ಯತ್ ಸರ್ವಂ** = ಯಾವಾಗ ಎಲ್ಲವನ್ನೂ **ಪ್ರಕಾಶಯತಿ** = ಪ್ರಕಾಶಿಸುವನೊ, **ತೇನ** = ಅದರಿಂದ **ಸರ್ವಾನ್** = ಎಲ್ಲ **ಪ್ರಾಣಾನ್** = ಪ್ರಾಣಗಳನ್ನು **ರಶ್ಮಿಷು** = ರಶ್ಮಿಗಳಲ್ಲಿ **ಸಂನಿಧತ್ತೇ** = ಸೇರಿಸಿಕೊಳ್ಳುತ್ತಾನೆ.

೬. ಈಗ ಆದಿತ್ಯನು ಉದಯಿಸುತ್ತ[೧] ಪೂರ್ವದಿಕ್ಕನ್ನು ಯಾವಾಗ ಪ್ರವೇಶಿಸುವನೊ,[೨] (ಆಗ) ತನ್ನ ವ್ಯಾಪ್ತಿಯಿಂದ ಪೂರ್ವದಲ್ಲಿರುವ ಪ್ರಾಣಿಗಳನ್ನು (ತನ್ನ) ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ;[೩] ಯಾವಾಗ ಪಶ್ಚಿಮ ಉತ್ತರ ದಕ್ಷಿಣಗಳನ್ನು, ಯಾವಾಗ ಕೆಳಗಡೆಯನ್ನು ಮೇಲ್ಗಡೆಯನ್ನು, ಯಾವಾಗ ಅಂತರದಿಕ್ಕುಗಳನ್ನು, ಯಾವಾಗ ಎಲ್ಲವನ್ನೂ ಪ್ರಕಾಶಿಸುವನೊ, (ಆಗ) ಅದರಿಂದ[೪] ಸರ್ವಪ್ರಾಣಗಳನ್ನು ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.

[ಅಮೂರ್ತನಾದ ಪ್ರಾಣನು ತಿನ್ನುವವನೂ (ಅತ್ತೃ), ತಿನ್ನಲ್ಪಡತಕ್ಕವನೂ (ಅನ್ನ)—ಎಲ್ಲವೂ ಆಗಿರುತ್ತಾನೆ

೧ ಪ್ರಾಣಿಗಳ ಕಣ್ಣುಗಳಿಗೆ ಗೋಚರನಾಗುತ್ತ.
೨ ಸ್ವಪ್ರಕಾಶದಿಂದ ವ್ಯಾಪಿಸಿಕೊಳ್ಳುವನೊ.
೩ ಆತ್ಮಭೂತವನ್ನಾಗಿ ಮಾಡುತ್ತಾನೆಯೊ.
೪ ಸ್ವಪ್ರಕಾಶವ್ಯಾಪ್ತಿಯಿಂದ ]

## ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತದೃಚಾಭ್ಯುಕ್ತಮ್ ॥ ೭ ॥

**ಸಃ ಏಷಃ** = ಆ ಈ **ವೈಶ್ವಾನರಃ**=ಸರ್ವಾತ್ಮನೂ **ವಿಶ್ವರೂಪಃ**=ವಿಶ್ವರೂಪನೂ ಆದ **ಪ್ರಾಣಃ** = ಪ್ರಾಣನು **ಉದಯತೇ**=ಉದಯಿಸುತ್ತಾನೆ, [ಸಃ ಏವ = ಅವನೇ] **ಅಗ್ನಿಃ** = ಅಗ್ನಿಯು. **ತತ್ ಏತತ್** = ಆ ಇದು **ಋಚಾ**=ಋಕ್ಕಿನಿಂದ **ಅಭ್ಯುಕ್ತಂ**= ಹೇಳಲ್ಪಟ್ಟಿದೆ.

೭. ಸರ್ವಾತ್ಮನೂ ವಿಶ್ವರೂಪನೂ ಆದ ಆ ಈ ಪ್ರಾಣನೇ ಉದಯಿಸುತ್ತಾನೆ;[೧] (ಅವನೇ) ಅಗ್ನಿ. ಆ ಇದು ಋಕ್ಕಿನಿಂದ ಹೇಳಲ್ಪಟ್ಟಿದೆ.

[[೧] ಪ್ರತಿದಿನವೂ ಪ್ರತಿ ದಿಕ್ಕುಗಳನ್ನೂ ತನ್ನದಾಗಿ ಮಾಡಿಕೊಂಡು ಉದಯಿಸುತ್ತಾನೆ.]

**ವಿಶ್ವರೂಪಂ ಹರಿಣಂ ಜಾತವೇದಸಂ**
**ಪರಾಯಣಂ ಜ್ಯೋತಿರೇಕಂ ತಪಂತಮ್ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ**
**ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥ ೮ ॥**

ವಿಶ್ವರೂಪಂ=ಸರ್ವರೂಪನಾದ ಹರಿಣಂ=ರಶ್ಮಿವಂತನಾದ ಜಾತವೇದಸಂ=ಜಾತಪ್ರಜ್ಞನಾದ ಪರಾಯಣಂ=ಸರ್ವಪ್ರಾಣಾಶ್ರಯನಾದ ತಪಂತಂ=ತಪಿಸುತ್ತಿರುವವನಾದ ಏಕಂ ಜ್ಯೋತಿಃ=ಏಕಜ್ಯೋತಿಯನ್ನು [ಬ್ರಹ್ಮವಿದಃ ವಿಜ್ಞಾತವಂತಃ=ಬ್ರಹ್ಮವಿದರು ತಿಳಿದಿರುವರು], ಸಹಸ್ರರಶ್ಮಿಃ=ಅನೇಕ ರಶ್ಮಿಗಳುಳ್ಳವನಾದ ಶತಧಾ ವರ್ತಮಾನಃ=ಅನೇಕ ವಿಧದಲ್ಲಿ ಇರುವವನಾದ ಪ್ರಜಾನಾಂ=ಪ್ರಜೆಗಳ ಪ್ರಾಣಃ=ಪ್ರಾಣನಾದ ಏಷಃ ಸೂರ್ಯಃ=ಈ ಸೂರ್ಯನು ಉದಯತಿ=ಉದಯಿಸುತ್ತಾನೆ.

೮. ಸರ್ವರೂಪನೂ ರಶ್ಮಿವಂತನೂ ಜಾತಪ್ರಜ್ಞನೂ ಸರ್ವಪ್ರಾಣಿಗಳಿಗೆ ಆಶ್ರಯನೂ ತಪಿಸುತ್ತಿರುವವನೂ ಆದ ಏಕಜ್ಯೋತಿಯನ್ನು[೧] (ಬ್ರಹ್ಮಜ್ಞಾನಿಗಳು ತಿಳಿದುಕೊಂಡಿರುವರು.) ಅನೇಕ ರಶ್ಮಿಗಳುಳ್ಳವನೂ, ಅನೇಕ ವಿಧದಲ್ಲಿ[೨] ಇರುವವನೂ, ಪ್ರಜೆಗಳ ಪ್ರಾಣನೂ ಆದ ಈ ಸೂರ್ಯನು ಉದಯಿಸುತ್ತಾನೆ.

[[೧] ಸರ್ವಪ್ರಾಣಿಗಳಿಗೂ ಕಣ್ಣಾಗಿಯೂ, ಅದ್ವಿತೀಯನೂ.
[೨] ಪ್ರಾಣಿಭೇದದಿಂದ ಬಹುವಿಧನಾಗಿ.

**ಸಂವತ್ಸರೋ ವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋತ್ತರಂ ಚ । ತದ್ಯೇ ಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ । ತೇ ಚಾಂದ್ರಮಸಮೇವ ಲೋಕಮಭಿಜಯಂತೇ । ತ ಏವ ಪುನರಾವರ್ತಂತೇ ತಸ್ಮಾದೇತ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೇ । ಏಷ ಹ ವೈ ರಯಿರ್ಯಃ ಪಿತೃಯಾಣಃ ॥ ೯ ॥**

**ಸಂವತ್ಸರಃ ವೈ** = ಸಂವತ್ಸರವೇ **ಪ್ರಜಾಪತಿಃ** = ಪ್ರಜಾಪತಿಯು; **ತಸ್ಯ** = ಅದಕ್ಕೆ **ದಕ್ಷಿಣಂ ಚ ಉತ್ತರಂ ಚ**=ದಕ್ಷಿಣವೆಂಬ ಮತ್ತು ಉತ್ತರವೆಂಬ **ಅಯನೇ**= ಎರಡು ಮಾರ್ಗಗಳು. **ತತ್**=ಬ್ರಾಹ್ಮಣಾದಿಗಳಲ್ಲಿ **ಯೇ ಹ ವೈ** = ಯಾರು **ಇಷ್ಟಾ-ಪೂರ್ತೇ ಇತಿ** = ಇಷ್ಟಾಪೂರ್ತಗಳೆಂಬ **ತತ್ ಕೃತಂ**= ಆ ಕೃತವನ್ನು **ಉಪಾಸತೇ** = ಉಪಾಸಿಸುವರೊ **ತೇ**= ಅವರು **ಚಾಂದ್ರಮಸಂ ಏವ**= ಚಂದ್ರಲೋಕವನ್ನೇ **ಅಭಿ-ಜಯಂತೇ**= ಜಯಿಸುತ್ತಾರೆ ಎಂದರೆ ಹೊಂದುತ್ತಾರೆ; **ತೇ ಏವ**= ಅವರೇ **ಪುನಃ**= ಪುನಃ **ಆವರ್ತಂತೇ**=ಹಿಂತಿರುಗುತ್ತಾರೆ. **ತಸ್ಮಾತ್**=ಆದುದರಿಂದ **ಪ್ರಜಾಕಾಮಾಃ**= ಪ್ರಜಾಕಾಮರಾದ **ಏತೇ ಋಷಯಃ**= ಈ ಋಷಿಗಳು **ದಕ್ಷಿಣಂ**= ದಕ್ಷಿಣಮಾರ್ಗವನ್ನು **ಪ್ರತಿಪದ್ಯಂತೇ** = ಹೊಂದುತ್ತಾರೆ. **ಯಃ ಪಿತೃಯಾಣಃ** = ಯಾವುದು ಪಿತೃಯಾನವೊ **ಏಷಃ ಹ ವೈ ರಯಿಃ** = ಇದೇ ಅನ್ನ.

೯. ಸಂವತ್ಸರವೇ[೧] ಪ್ರಜಾಪತಿಯು; ಅದಕ್ಕೆ ದಕ್ಷಿಣವೆಂಬ ಮತ್ತು ಉತ್ತರವೆಂಬ ಎರಡು ಮಾರ್ಗಗಳಿವೆ.[೨] ಬ್ರಾಹ್ಮಣಾದಿಗಳಲ್ಲಿ ಯಾರು ಇಷ್ಟಾಪೂರ್ತಗಳೆಂಬ[೩] ಆ ಕೃತವನ್ನು ಉಪಾಸಿಸುವರೊ ಅವರು ಚಂದ್ರಲೋಕವನ್ನೇ ಹೊಂದುತ್ತಾರೆ; ಅವರೇ ಪುನಃ ಹಿಂತಿರುಗುತ್ತಾರೆ ಆದುದರಿಂದ ಪ್ರಜಾಕಾಮರಾದ ಈ ಋಷಿಗಳು ದಕ್ಷಿಣಮಾರ್ಗವನ್ನು[೪] ಹೊಂದುತ್ತಾರೆ. ಯಾವುದು ಪಿತೃಯಾನವೊ[೫] ಅದು ಈ ಅನ್ನ.

[ಮೂರ್ತಿಯೂ ಅನ್ನವೂ ಆದ ಚಂದ್ರನು ಮತ್ತು ಅಮೂರ್ತಿಯೂ ಪ್ರಾಣನೂ ಅತ್ತೃವೂ ಆದ ಆದಿತ್ಯನು ಇವರ ಮಿಥುನದಿಂದ ಎಲ್ಲವೂ ಆಗಿರುತ್ತದೆ.

[೧] ಸೂರ್ಯಚಂದ್ರರಿಂದ ಉಂಟಾದ ಕಾಲ.

[೨] ಕೇವಲ ಕರ್ಮಿಗಳಿಗೆ ದಕ್ಷಿಣಮಾರ್ಗ, ಜ್ಞಾನದಿಂದ ಕೂಡಿದ ಕರ್ಮಿಗಳಿಗೆ ಉತ್ತರಮಾರ್ಗ

[೩] ಇಷ್ಟವೆಂದರೆ ಅಗ್ನಿಹೋತ್ರಾದಿಗಳು, ಪೂರ್ತವೆಂದರೆ ಬಾವಿ ಮೊದಲಾದುವುಗಳನ್ನು ಕಟ್ಟಿಸುವುದು.

[೪] ದಕ್ಷಿಣಾಯನವೆಂಬ ಉಪಲಕ್ಷಣವುಳ್ಳ ಚಂದ್ರನನ್ನು.

[೫] ಪಿತೃಯಾಣವೆಂಬ ಉಪಲಕ್ಷಣವುಳ್ಳ ಚಂದ್ರನನ್ನು ]

**ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯ-ಯಾತ್ಮಾನಮನ್ವಿಷ್ಯಾದಿತ್ಯಮಭಿಜಯಂತೇ । ಏತದ್ವೈ ಪ್ರಾಣಾನಾ-ಮಾಯತನಮೇತದಮೃತಮಭಯಮೇತತ್ಪರಾಯಣಮೇತಸ್ಮಾನ್ನ ಪುನರಾವರ್ತಂತ ಇತ್ಯೇಷ ನಿರೋಧಸ್ತದೇಷ ಶ್ಲೋಕಃ ॥ ೧೦ ॥**

**ಅಥ** = ಈಗ **ತಪಸಾ** = ಇಂದ್ರಿಯಜಯದಿಂದಲೂ **ಬ್ರಹ್ಮಚರ್ಯೇಣ** = ಬ್ರಹ್ಮಚರ್ಯದಿಂದಲೂ **ಶ್ರದ್ಧಯಾ**=ಶ್ರದ್ಧೆಯಿಂದಲೂ **ವಿದ್ಯಯಾ**=ವಿದ್ಯೆಯಿಂದಲೂ **ಆತ್ಮಾನಂ** = ಆತ್ಮನನ್ನು **ಅನ್ವಿಷ್ಯ** = ಅನ್ವೇಷಿಸಿ **ಉತ್ತರೇಣ** = ಉತ್ತರಮಾರ್ಗದಿಂದ **ಆದಿತ್ಯಂ** = ಆದಿತ್ಯಲೋಕವನ್ನು **ಅಭಿಜಯಂತೇ** = ಹೊಂದುತ್ತಾರೆ; **ಏತತ್ ವೈ** = ಇದೇ **ಪ್ರಾಣಾನಾಂ** = ಪ್ರಾಣಿಗಳ **ಆಯತನಂ** = ಆಶ್ರಯವು; **ಏತತ್** = ಇದು **ಅಮೃತಂ**=ಅಮೃತವು, **ಅಭಯಂ** = ಅಭಯವು; **ಏತತ್**=ಇದು **ಪರಾಯಣಂ**= ಪರಮಗತಿ. **ಏತಸ್ಮಾತ್** = ಇದರಿಂದ **ನ ಪುನರಾವರ್ತಂತೇ** = ಹಿಂತಿರುಗುವುದಿಲ್ಲ **ಇತಿ** = ಎಂದು; [**ಯಸ್ಮಾತ್** = ಏಕೆಂದರೆ] **ಏಷಃ** = ಇದು [**ಅವಿದುಷಾಂ** = ಅಜ್ಞಾನಿಗಳಿಗೆ] **ನಿರೋಧಃ** = ತಡೆ. **ತತ್** = ಆ ವಿಷಯದಲ್ಲಿ **ಏಷಃ ಶ್ಲೋಕಃ** = ಈ ಮಂತ್ರವು [ಇದೆ].

೧೦. ಈಗ ಇಂದ್ರಿಯಜಯದಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ[೧] ಆತ್ಮನನ್ನು[೨] ಅನ್ವೇಷಿಸಿ ಉತ್ತರಮಾರ್ಗದಿಂದ ಆದಿತ್ಯಲೋಕವನ್ನು ಹೊಂದುತ್ತಾರೆ; ಇದೇ ಪ್ರಾಣಿಗಳಿಗೆ ಆಶ್ರಯವು; ಇದು ಅಮೃತವು, ಅಭಯವು; ಇದು ಪರಮಗತಿ,[೩] ಇದರಿಂದ ಹಿಂತಿರುಗುವುದಿಲ್ಲ; (ಏಕೆಂದರೆ) ಇದು (ಅಜ್ಞಾನಿಗಳಿಗೆ) ತಡೆ.[೪] ಆ ವಿಷಯದಲ್ಲಿ ಈ ಮಂತ್ರವುಂಟು:

[ಉತ್ತರಮಾರ್ಗದಲ್ಲಿ ಹೋಗುವವರು ಆದಿತ್ಯನನ್ನು (ಪ್ರಜಾಪತಿಯ ಅಂಶವಾದ ಅತ್ತ್ರವನ್ನು ಅಥವಾ ಪ್ರಾಣನನ್ನು) ಯಾವುದರ ಮೂಲಕ ಹೊಂದುತ್ತಾರೆ?

೧ ಪ್ರಜಾಪತ್ಯಾತ್ಮವಿಷಯವಾದ.

೨ ಪ್ರಾಣನನ್ನು ಎಂದರೆ ಸ್ಥಾವರಕ್ಕೂ ಜಂಗಮಕ್ಕೂ ಆತ್ಮನಾದ ಸೂರ್ಯನನ್ನು ಹುಡುಕಿ, 'ನಾನೇ ಅವನು' ಎಂದು ತಿಳಿದುಕೊಂಡು.

೩ ಜ್ಞಾನಿಗಳಿಗೂ, ಜ್ಞಾನದೊಡನೆ ಕರ್ಮವನ್ನು ಮಾಡುವವರಿಗೂ

೪ ಆದಿತ್ಯನು ಅಜ್ಞಾನಿಗಳನ್ನು ತಡೆಯುತ್ತಾನೆ.]

**ಪಂಚಪಾದಂ ಪಿತರಂ ದ್ವಾದಶಾಕೃತಿಂ**
**ದಿವ ಆಹುಃ ಪರೇ ಅರ್ಧೇ ಪುರೀಷಿಣಮ್ ।**
**ಅಥೇಮೇ ಅನ್ಯ ಉ ಪರೇ ವಿಚಕ್ಷಣಂ**
**ಸಪ್ತಚಕ್ರೇ ಷಡರ ಆಹುರರ್ಪಿತಮಿತಿ ॥ ೧೧ ॥**

**ಪಂಚಪಾದಂ** = ಪಂಚಪಾದಗಳುಳ್ಳ **ಪಿತರಂ** = ಪಿತೃವನ್ನು **ದ್ವಾದಶಾಕೃತಿಂ** = ಹನ್ನೆರಡು ಆಕೃತಿಗಳುಳ್ಳವನೆಂದೂ **ದಿವಃ** = ದ್ಯುಲೋಕಕ್ಕಿಂತ **ಪರೇ ಅರ್ಧೇ** =

ಊರ್ಧ್ವಸ್ಥಾನದಲ್ಲಿ **ಪುರೀಷಿಣಂ** = ನೀರಿನಿಂದ ತುಂಬಿರುವವನೆಂದೂ, [**ಕಾಲವಿದಃ** = ಕಾಲವನ್ನು ತಿಳಿದವರು] **ಆಹುಃ** = ಹೇಳುವರು. **ಅಥ** = ಪುನಃ [**ತಂ ಏವ** = ಅವನನ್ನೇ] **ಇಮೇ ಅನ್ಯೇ ಉ ಪರೇ** = ಇತರ ಕಾಲವಿದರು **ವಿಚಕ್ಷಣಂ** = ನಿಪುಣನೆಂದು, ಸರ್ವಜ್ಞನೆಂದು **ಆಹುಃ** = ಹೇಳುತ್ತಾರೆ, [**ಚ** = ಮತ್ತು] **ಸಪ್ತಚಕ್ರೇ** = ಏಳು ಕುದುರೆಗಳ ರೂಪದಿಂದ ಸುತ್ತುತ್ತಿರುವವನಾದ **ಷಡರೇ** = ಆರು ಆರೆಕಾಲುಗಳುಳ್ಳ [**ತಸ್ಮಿನ್ ಕಾಲಾತ್ಮನಿ** = ಆ ಕಾಲಾತ್ಮನಲ್ಲಿ **ಇದಂ ಸರ್ವಂ ಜಗತ್** = ಈ ಎಲ್ಲ ಜಗತ್ತು] **ಅರ್ಪಿತಂ ಇತಿ** [**ಆಹುಃ**] = ಅರ್ಪಿತವಾಗಿದೆಯೆಂದು ಹೇಳುವರು.

೧೧. ಪಂಚಪಾದಗಳುಳ್ಳ[೧] ಈ ಪಿತೃವು[೨] ಹನ್ನೆರಡು ಆಕೃತಿಗಳುಳ್ಳವನೆಂದೂ,[೩] ದ್ಯುಲೋಕಕ್ಕಿಂತ ಊರ್ಧ್ವಸ್ಥಾನದಲ್ಲಿ ನೀರಿನಿಂದ ತುಂಬಿರುವವನೆಂದೂ, (ಕಾಲವಿದರು) ಹೇಳುವರು. ಪುನಃ ಅವನನ್ನೇ ಸರ್ವಜ್ಞನೆಂದು ಇತರ ಕಾಲವಿದರು ಹೇಳುತ್ತಾರೆ; (ಮತ್ತು) ಏಳು ಕುದುರೆಗಳ ರೂಪದಿಂದ ಸುತ್ತುತ್ತಿರುವವನೂ, ಆರು ಆರೆಕಾಲುಗಳುಳ್ಳವನೂ[೪] ಆದ (ಆ ಕಾಲಾತ್ಮನಲ್ಲಿ ಈ ಎಲ್ಲ ಜಗತ್ತು) ಅರ್ಪಿತವಾಗಿದೆಯೆಂದು[೫] (ಹೇಳುವರು.)

[ಚಂದ್ರಾದಿತ್ಯಲಕ್ಷಣನಾದ ಸಂವತ್ಸರನೆಂಬ ಕಾಲಾತ್ಮನು ಜಗತ್ತಿಗೆ ಕಾರಣನು.

೧ ಸಂವತ್ಸರಾತ್ಮನಾದ ಆದಿತ್ಯನಿಗೆ ಐದು ಋತುಗಳೇ ಐದು ಪಾದಗಳು. ಇಲ್ಲಿ ಹೇಮಂತಶಿಶಿರಗಳನ್ನು ಒಂದಾಗಿ ಪರಿಗಣಿಸಲಾಗಿದೆ.

೨ ಎಲ್ಲವನ್ನೂ ಸೃಷ್ಟಿಸುವುದರಿಂದ ಇವನನ್ನು ಪಿತೃವೆಂದು ಹೇಳಿದೆ

೩ ಹನ್ನೆರಡು ತಿಂಗಳುಗಳು ಇವನಿಗೆ ಅವಯವಗಳು.

೪ ಆರು ಋತುಗಳುಳ್ಳವನು.

೫ ರಥನಾಭಿಯಲ್ಲಿ ಆರೆಕಾಲುಗಳಂತೆ.]

**ಮಾಸೋ ವೈ ಪ್ರಜಾಪತಿಸ್ತಸ್ಯ ಕೃಷ್ಣಪಕ್ಷ ಏವ ರಯಿಃ, ಶುಕ್ಲಃ ಪ್ರಾಣಸ್ತಸ್ಮಾದೇತ ಋಷಯಃ ಶುಕ್ಲ ಇಷ್ಟಂ ಕುರ್ವಂತೀತರ ಇತರಸ್ಮಿನ್ ॥ ೧೨ ॥**

**ಮಾಸಃ ವೈ** = ತಿಂಗಳೇ **ಪ್ರಜಾಪತಿಃ** = ಪ್ರಜಾಪತಿಯು. **ತಸ್ಯ** = ಅವನಿಗೆ **ಕೃಷ್ಣಪಕ್ಷಃ ಏವ** = ಕೃಷ್ಣಪಕ್ಷವೇ **ರಯಿಃ** = ಅನ್ನವು, **ಶುಕ್ಲಃ** = ಶುಕ್ಲಪಕ್ಷವೇ **ಪ್ರಾಣಃ** = ಪ್ರಾಣವು. **ತಸ್ಮಾತ್** = ಆದುದರಿಂದ **ಏತೇ ಋಷಯಃ** = ಈ ಋಷಿಗಳು **ಶುಕ್ಲೇ** = ಶುಕ್ಲಪಕ್ಷದಲ್ಲಿ **ಇಷ್ಟಂ** = ಯಾಗವನ್ನು **ಕುರ್ವಂತಿ** = ಮಾಡುತ್ತಾರೆ, **ಇತರೇ** = ಇತರರು **ಇತರಸ್ಮಿನ್** = ಇನ್ನೊಂದರಲ್ಲಿ ಎಂದರೆ ಕೃಷ್ಣಪಕ್ಷದಲ್ಲಿ [**ಇಷ್ಟಂ ಕುರ್ವಂತಿ** = ಯಾಗವನ್ನು ಮಾಡುತ್ತಾರೆ].

೧೨. ತಿಂಗಳೇ ಪ್ರಜಾಪತಿಯು. ಅವನಿಗೆ ಕೃಷ್ಣಪಕ್ಷವೇ ಅನ್ನ,[೧] ಶುಕ್ಲಪಕ್ಷವು ಪ್ರಾಣ.[೨] ಆದುದರಿಂದ ಈ ಋಷಿಗಳು ಶುಕ್ಲಪಕ್ಷದಲ್ಲಿ ಯಾಗವನ್ನು ಮಾಡುತ್ತಾರೆ.[೩] ಇತರರು ಕೃಷ್ಣಪಕ್ಷದಲ್ಲಿ ಮಾಡುತ್ತಾರೆ.[೪]

[ಯಾವನು ವಿಶ್ವಕ್ಕೆಲ್ಲ ಆಶ್ರಯನೋ ಆ ಸಂವತ್ಸರನೆಂಬ ಪ್ರಜಾಪತಿಯೇ ತನ್ನ ಅವಯವವಾದ ಮಾಸದಲ್ಲಿ ಪರಿಸಮಾಪ್ತನಾಗಿರುತ್ತಾನೆ.

೧ ಎಂದರೆ ಚಂದ್ರನು.

೨ ಅತ್ತೃ ಅಥವಾ ಅಗ್ನಿ.

೩ ಶುಕ್ಲಪಕ್ಷರೂಪನಾದ ಪ್ರಾಣನು ಎಲ್ಲವೂ ಆಗಿರುವನೆಂದು ಅರಿತಿರುವವರು ಕೃಷ್ಣಪಕ್ಷದಲ್ಲಿ ಯಾಗವನ್ನು ಮಾಡಿದರೂ ಶುಕ್ಲಪಕ್ಷದಲ್ಲಿ ಮಾಡಿದವರಂತೆಯೇ; ಏಕೆಂದರೆ ಪ್ರಾಣಾತ್ಮೋಪಾಸಕರಿಗೆ ಕೃಷ್ಣಪಕ್ಷವು ಪ್ರಾಣಕ್ಕಿಂತ ಬೇರೆಯಾಗಿ ತೋರುವುದಿಲ್ಲ.

೪ ಪ್ರಾಣಸ್ವರೂಪವನ್ನು ಅರಿಯದ ಇತರರು ಶುಕ್ಲಪಕ್ಷದಲ್ಲಿ ಯಾಗವನ್ನು ಮಾಡಿದರೂ ಕೃಷ್ಣಪಕ್ಷದಲ್ಲಿ ಮಾಡಿದಂತೆಯೇ.]

**ಅಹೋರಾತ್ರೋ ವೈ ಪ್ರಜಾಪತಿಸ್ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೇ ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತೇ ॥ ೧೩ ॥**

**ಅಹೋರಾತ್ರಃ ವೈ** = ಹಗಲುರಾತ್ರಿಯೇ **ಪ್ರಜಾಪತಿಃ** = ಪ್ರಜಾಪತಿಯು, **ತಸ್ಯ** = ಅವನಿಗೆ **ಅಹಃ ಏವ** = ಹಗಲೇ **ಪ್ರಾಣಃ** = ಪ್ರಾಣವು, **ರಾತ್ರಿಃ ಏವ** = ರಾತ್ರಿಯೇ **ರಯಿಃ** = ಅನ್ನ. **ಯೇ** = ಯಾರು **ದಿವಾ** = ಹಗಲಿನಲ್ಲಿ **ರತ್ಯಾ** = ರತಿಕಾರಣಳಾದ ಸ್ತ್ರೀಯೊಂದಿಗೆ **ಸಂಯುಜ್ಯಂತೇ** = ಕೂಡುವರೊ **ಏತೇ** = ಇವರು **ಪ್ರಾಣಂ ವೈ**=ಪ್ರಾಣವನ್ನೇ **ಪ್ರಸ್ಕಂದಂತಿ**=ಚೆಲ್ಲುತ್ತಾರೆ, ಶೋಷಿಸುತ್ತಾರೆ. **ರಾತ್ರೌ**=ರಾತ್ರಿಯಲ್ಲಿ **ಯತ್ ರತ್ಯಾ ಸಂಯುಜ್ಯಂತೇ** = ರತಿಯೊಂದಿಗೆ ಕೂಡುವುದೆಂಬುದು **ತತ್** = ಅದು **ಬ್ರಹ್ಮಚರ್ಯಂ ಏವ** = ಬ್ರಹ್ಮಚರ್ಯವೇ.

೧೩. ಹಗಲು ರಾತ್ರಿಗಳೇ ಪ್ರಜಾಪತಿಯು. ಅವನಿಗೆ ಹಗಲೇ ಪ್ರಾಣ. ರಾತ್ರಿಯೇ ಅನ್ನ. ಯಾರು ಹಗಲಿನಲ್ಲಿ ರತಿಕಾರಣಳಾದ ಸ್ತ್ರೀಯೊಂದಿಗೆ ಕೂಡುವರೊ ಅವರು ಪ್ರಾಣವನ್ನೇ ಚೆಲ್ಲುತ್ತಾರೆ. ರಾತ್ರಿಯಲ್ಲಿ ರತಿಯೊಂದಿಗೆ ಕೂಡುವುದು ಬ್ರಹ್ಮಚರ್ಯವೇ.[೧]

[ಮಾಸಾತ್ಮನಾದ ಪ್ರಜಾಪತಿಯು ತನ್ನ ಅವಯವವಾದ ಹಗಲುರಾತ್ರಿಗಳಲ್ಲಿ ಸಮಾಪ್ತನಾಗಿರುತ್ತಾನೆ.

[1] ಇದು ನೈಷ್ಠಿಕ ಬ್ರಹ್ಮಚರ್ಯವಲ್ಲ, ಗೃಹಸ್ಥರಿಗೆ ಆವಶ್ಯಕವಾದ ಸಂಯಮ.]

**ಅನ್ನಂ ವೈ ಪ್ರಜಾಪತಿಸ್ತತೋ ಹ ವೈ ತದ್ರೇತಸ್ತಸ್ಮಾದಿಮಾಃ ಪ್ರಜಾಃ ಪ್ರಜಾಯಂತ ಇತಿ ॥ ೧೪ ॥**

ಅನ್ನಂ ವೈ = ಅನ್ನವೇ ಪ್ರಜಾಪತಿಃ = ಪ್ರಜಾಪತಿಯು, ತತಃ ಹ ವೈ = ಅದರಿಂದಲೇ ತತ್ ರೇತಃ = ಆ ರೇತಸ್ಸು [ಉತ್ಪನ್ನವಾಗುತ್ತದೆ]. **ತಸ್ಮಾತ್** = ಅದರಿಂದ ಇಮಾಃ = ಈ ಪ್ರಜಾಃ = ಪ್ರಜೆಗಳು ಪ್ರಜಾಯಂತೇ = ಹುಟ್ಟುತ್ತಾರೆ ಇತಿ = ಎಂದು.

**೧೪.** ಅನ್ನವೇ ಪ್ರಜಾಪತಿಯು. ಅದರಿಂದಲೇ ಆ ರೇತಸ್ಸು (ಉತ್ಪನ್ನವಾಗುತ್ತದೆ.) ಅದರಿಂದ ಈ ಪ್ರಜೆಗಳು ಹುಟ್ಟುತ್ತಾರೆ.

['ಈ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?' ಎಂಬ ಕಬಂಧಿಯ ಪ್ರಶ್ನೆಗೆ ಇದು ಉತ್ತರ. ಚಂದ್ರಾದಿತ್ಯಮಿಥುನದಿಂದ ಅಹೋರಾತ್ರಿಯೆಂಬ ಮಿಥುನದ ವರೆಗೆ ಅನ್ನ ರೇತಸ್ಸುಗಳ ಮೂಲಕ ಪ್ರಜೆಗಳು ಹುಟ್ಟುತ್ತಾರೆ.]

**ತದ್ಯೇ ಹ ವೈ ತತ್ಪ್ರಜಾಪತಿವ್ರತಂ ಚರಂತಿ ತೇ ಮಿಥುನಮುತ್ಪಾದಯಂತೇ । ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಮ್ ॥ ೧೫ ॥**

ತತ್ = ಹೀಗಿರಲು **ಯೇ ಹ ವೈ** = ಯಾವ ಗೃಹಸ್ಥರು ತತ್ ಪ್ರಜಾಪತಿವ್ರತಂ = ಆ ಪ್ರಜಾಪತಿವ್ರತವನ್ನು ಚರಂತಿ = ಅನುಷ್ಠಿಸುವರೊ ತೇ = ಅವರು ಮಿಥುನಂ = ಮಿಥುನವನ್ನು ಉತ್ಪಾದಯಂತೇ = ಉತ್ಪಾದಿಸುತ್ತಾರೆ. **ಯೇಷಾಂ** = ಯಾರಿಗೆ ತಪಃ ಬ್ರಹ್ಮಚರ್ಯಂ = ತಪಸ್ಸುಬ್ರಹ್ಮಚರ್ಯಗಳೊ, **ಯೇಷು** = ಯಾರಲ್ಲಿ ಸತ್ಯಂ = ಸತ್ಯವು ಪ್ರತಿಷ್ಠಿತಂ = ಪ್ರತಿಷ್ಠಿತವಾಗಿರುವುದೊ **ತೇಷಾಂ ಏವ** = ಅವರಿಗೇ ಏಷಃ = ಈ ಬ್ರಹ್ಮಲೋಕಃ = ಬ್ರಹ್ಮಲೋಕವು.

**೧೫.** ಹೀಗಿರಲು ಯಾವ ಗೃಹಸ್ಥರು ಆ ಪ್ರಜಾಪತಿವ್ರತವನ್ನು ಅನುಷ್ಠಿಸುವರೊ ಅವರು ಮಿಥುನವನ್ನು[1] ಉತ್ಪಾದಿಸುತ್ತಾರೆ. ಯಾರು ತಪಸ್ಸು ಬ್ರಹ್ಮಚರ್ಯಗಳನ್ನು[2] ಅನುಷ್ಠಿಸುವರೊ, ಯಾರಲ್ಲಿ ಸತ್ಯವು ಪ್ರತಿಷ್ಠಿತವಾಗಿರುವುದೊ, ಅವರಿಗೇ ಈ ಬ್ರಹ್ಮಲೋಕ.[3]

[೧ ಮಗ ಮಗಳು.

೨ ಇಲ್ಲಿ ತಪಸ್ಸೆಂದರೆ ಸ್ನಾತಕವ್ರತ ಮೊದಲಾದುವು ಬ್ರಹ್ಮಚರ್ಯವೆಂದರೆ ಗೃಹಸ್ಥರಿಗೆ ಆವಶ್ಯಕವಾದ ಬ್ರಹ್ಮಚರ್ಯ.

೩ ಪಿತೃಯಾಣರೂಪವಾದ ಮತ್ತು ಚಂದ್ರನಿಗೆ ಸಂಬಂಧಿಸಿದ.]

**ತೇಷಾಮಸೌ ವಿರಜೋ ಬ್ರಹ್ಮಲೋಕೋ**
**ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ ॥ ೧೬ ॥**

**ಯೇಷು** = ಯಾರಲ್ಲಿ **ಜಿಹ್ಮಂ** - ಕುಟಿಲತೆ **ಅನೃತಂ** = ಅನೃತ **ನ** = ಇಲ್ಲವೊ, **ಮಾಯಾ ಚ ನ** = ಮಾಯೆಯಿಲ್ಲವೊ, **ತೇಷಾಂ** = ಅವರಿಗೆ **ಅಸೌ** = ಈ **ವಿರಜಃ** = ರಜಸ್ಸಿಲ್ಲದ **ಬ್ರಹ್ಮಲೋಕಃ** = ಬ್ರಹ್ಮಲೋಕವು **ಇತಿ** = ಎಂದು.

**೧೬.** ಯಾರಲ್ಲಿ೧ ಕುಟಿಲತೆಯಾಗಲಿ ಅನೃತವಾಗಲಿ ಮಾಯೆಯಾಗಲಿ೨ ಇಲ್ಲವೊ, ಅಂತಹವರಿಗೆ ಈ ರಜಸ್ಸಿಲ್ಲದ ಬ್ರಹ್ಮಲೋಕ.೩

[೧ ಜ್ಞಾನದಿಂದ ಕೂಡಿದ ಕರ್ಮಿಗಳಲ್ಲಿ ಎಂದರೆ ಬ್ರಹ್ಮಚಾರಿ-ವಾನಪ್ರಸ್ಥ-ಭಿಕ್ಷುಗಳಲ್ಲಿ.

೨ ಹೊರಗೆ ಒಂದು ವಿಧವಾಗಿ ತೋರಿಸಿಕೊಂಡು ಇನ್ನೊಂದು ವಿಧವಾಗಿ ಕೆಲಸ ಮಾಡುವುದು ಮಾಯೆ ಅಥವಾ ಮಿಥ್ಯಾಚಾರ.

೩ ಹಿಂದೆ ಹೇಳಿದ ಕರ್ಮಿಗಳಿಗೆ ಸಿಕ್ಕುವ ಬ್ರಹ್ಮಲೋಕದಲ್ಲಿ ವೃದ್ಧಿಕ್ಷಯಗಳುಂಟು, ರಜಸ್ಸುಂಟು. ಇದು ಶುದ್ಧವಾದ ಬ್ರಹ್ಮಲೋಕ.]

# ಎರಡನೆಯ ಪ್ರಶ್ನೆ

**ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಭಗವನ್ ಕತ್ಯೇವ ದೇವಾಃ ಪ್ರಜಾಂ ವಿಧಾರಯಂತೇ, ಕತರ ಏತತ್ ಪ್ರಕಾಶಯಂತೇ, ಕಃ ಪುನರೇಷಾಂ ವರಿಷ್ಠ ಇತಿ ॥ ೧ ॥**

ಅಥ ಹ = ಅನಂತರ ಭಾರ್ಗವಃ ವೈದರ್ಭಿಃ = ಭಾರ್ಗವ ವೈದರ್ಭಿಯು ಏನಂ = ಇವನನ್ನು ಪಪ್ರಚ್ಛ = ಪ್ರಶ್ನಿಸಿದನು: ಭಗವನ್ = ಭಗವಂತನೆ ಕತಿ ಏವ ದೇವಾಃ = ಎಷ್ಟು ದೇವತೆಗಳು ಪ್ರಜಾಂ = ಪ್ರಜೆಯನ್ನು ವಿಧಾರಯಂತೇ = ಧರಿಸಿಕೊಂಡಿರುತ್ತಾರೆ? ಕತರೇ = ಯಾರು ಏತತ್ = ಇದನ್ನು ಪ್ರಕಾಶಯಂತೇ = ಪ್ರಕಾಶಗೊಳಿಸುತ್ತಾರೆ? ಕಃ ಪುನಃ = ಮತ್ತೆ ಯಾರು ಏಷಾಂ = ಇವರಲ್ಲಿ ವರಿಷ್ಠಃ = ಶ್ರೇಷ್ಠನು ಇತಿ = ಎಂದು.

೧. ಅನಂತರ ಭಾರ್ಗವ ವೈದರ್ಭಿಯು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಎಷ್ಟು ದೇವತೆಗಳು[೧] ಪ್ರಜೆಯನ್ನು[೨] ಧರಿಸಿಕೊಂಡಿರುತ್ತಾರೆ?[೩] ಯಾರು[೪] ಇದನ್ನು[೫] ಪ್ರಕಾಶಗೊಳಿಸುತ್ತಾರೆ? ಮತ್ತೆ ಇವರಲ್ಲಿ[೬] ಯಾವನು ಶ್ರೇಷ್ಠನು?

[ಹಿಂದಿನ ಪ್ರಶ್ನೆಯಲ್ಲಿ ಪ್ರಾಣನು ಪ್ರಜಾಪತಿ, ಅತ್ತೃ ಎಂದು ಹೇಳಿದ್ದಾಯಿತು. ಈಗ ಅವನ ಪ್ರಜಾಪತಿತ್ವವನ್ನೂ ಮತ್ತು ಈ ಶರೀರದಲ್ಲಿ ಅವನ ಅತ್ತೃತ್ವವನ್ನೂ ನಿರ್ಣಯಿಸಲು ಈ ಪ್ರಶ್ನೆ ಆರಂಭವಾಗಿದೆ.

[೧] ಇಂದ್ರಿಯಗಳು.
[೨] ಶರೀರ, ಜೀವವಲ್ಲ.
[೩] ಯಾವ ಆಧಾರದಿಂದ ಈ ಶರೀರವು ನಿಂತಿರುವುದು?
[೪] ಬುದ್ಧೀಂದ್ರಿಯ-ಕರ್ಮೇಂದ್ರಿಯಗಳಲ್ಲಿ.
[೫] ತನ್ನ ಮಹಿಮೆಯ ಪ್ರಕಾಶನವನ್ನು.
[೬] ಶರೀರೇಂದ್ರಿಯ ರೂಪವಾದ.]

**ತಸ್ಮೈ ಸ ಹೋವಾಚಾಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ । ತೇ ಪ್ರಕಾಶ್ಯಾಭಿವದಂತಿ 'ವಯಮೇತದ್ಬಾಣಮವಷ್ಟಭ್ಯ ವಿಧಾರಯಾಮಃ' ॥ ೨ ॥**

ಸಃ = ಅವನು [ಪಿಪ್ಪಲಾದನು] ತಸ್ಮೈ = ಅವನಿಗೆ ಉವಾಚ ಹ = ಹೇಳಿದನು- ಏಷಃ ಹ ವೈ ದೇವಃ ಆಕಾಶಃ = ಈ ದೇವನಾದ ಆಕಾಶ ವಾಯುಃ = ವಾಯು

**ಅಗ್ನಿಃ** = ಅಗ್ನಿ **ಆಪಃ** = ನೀರು **ಪೃಥಿವೀ** = ಪೃಥಿವಿ **ವಾಕ್** = ವಾಕ್ಕು **ಮನಃ** = ಮನಸ್ಸು **ಚಕ್ಷುಃ** = ಕಣ್ಣು **ಶ್ರೋತ್ರಂ ಚ** = ಮತ್ತು ಕಿವಿ— **ತೇ**=ಇವರು **ಪ್ರಕಾಶ್ಯ**= ಪ್ರಕಾಶಿಸಿ **ಅಭಿವದಂತಿ** = ಹೇಳುತ್ತಾರೆ **ವಯಂ** = ನಾವು **ಏತತ್** = ಈ **ಬಾಣಂ**= ಶರೀರವನ್ನು **ಅವಷ್ಟಭ್ಯ**=ಎತ್ತಿ ಹಿಡಿದುಕೊಂಡು **ವಿಧಾರಯಾಮಃ**=ಧರಿಸಿರುತ್ತೇವೆ.

೨. ಪಿಪ್ಪಲಾದನು ಅವನಿಗೆ ಹೇಳಿದನು: ಈ ದೇವನಾದ ಆಕಾಶ ವಾಯು ಅಗ್ನಿ ನೀರು ಪೃಥಿವಿ[೧] ಮತ್ತು ವಾಕ್ಕು ಮನಸ್ಸು ಕಣ್ಣು ಕಿವಿ[೨]— ಇವರು ಪ್ರಕಾಶಿಸಿ[೩] (ಹೀಗೆ) ಹೇಳುತ್ತಾರೆ·[೪] 'ನಾವು ಈ ಶರೀರವನ್ನು ಎತ್ತಿ ಹಿಡಿದು ಧರಿಸಿರುತ್ತೇವೆ.[೫]'

[೧ ಶರೀರಕ್ಕೆ ಕಾರಣವಾದ ಪಂಚಮಹಾಭೂತಗಳು.
೨ ಕರ್ಮೇಂದ್ರಿಯ-ಬುದ್ಧೀಂದ್ರಿಯಗಳು.
೩ ತಮ್ಮ ಮಹಿಮೆಯನ್ನು ತೋರಿಸಿಕೊಂಡು.
೪ 'ನಾವೇ ಶ್ರೇಷ್ಠರು' ಎಂದು ಸ್ಪರ್ಧಿಸುತ್ತಾರೆ.
೫ ಕಂಬವು ಪ್ರಾಸಾದವನ್ನು ಎತ್ತಿ ಹಿಡಿದಂತೆ.]

**ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯ-ಥಾಹಮೇವೈತತ್ ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವ-ಷ್ಟಭ್ಯ ವಿಧಾರಯಾಮೀತಿ ತೇಽಶ್ರದ್ದಧಾನಾ ಬಭೂವುಃ ॥ ೩ ॥**

**ವರಿಷ್ಠಃ** = ಮುಖ್ಯನಾದ **ಪ್ರಾಣಃ** = ಪ್ರಾಣನು **ತಾನ್** = ಅವರನ್ನು ಕುರಿತು **ಉವಾಚ** = ಹೇಳಿದನು: **ಮೋಹಂ** = ಮೋಹವನ್ನು **ಮಾ ಆಪದ್ಯಥ** = ಹೊಂದಬೇಡಿರಿ; **ಅಹಂ ಏವ** = ನಾನೇ **ಆತ್ಮಾನಂ** = ನನ್ನನ್ನು **ಏತತ್** = ಹೀಗೆ **ಪಂಚಧಾ** = ಐದು ವಿಧವಾಗಿ **ಪ್ರವಿಭಜ್ಯ**=ವಿಭಾಗಿಸಿಕೊಂಡು **ಏತತ್ ಬಾಣಂ** = ಈ ಶರೀರವನ್ನು **ಅವಷ್ಟಭ್ಯ** = ಎತ್ತಿಹಿಡಿದುಕೊಂಡು **ವಿಧಾರಯಾಮಿ** = ಧರಿಸಿರುತ್ತೇನೆ **ಇತಿ** = ಎಂದು. **ತೇ** = ಅವರು **ಅಶ್ರದ್ದಧಾನಾಃ ಬಭೂವುಃ** = ಶ್ರದ್ಧೆಯಿಲ್ಲದವರಾದರು.

೩. ಮುಖ್ಯನಾದ ಪ್ರಾಣನು ಅವರಿಗೆ ಹೇಳಿದನು: 'ಮೋಹವನ್ನು ಹೊಂದಬೇಡಿರಿ; ನಾನೇ ನನ್ನನ್ನು ಹೀಗೆ ಐದು ವಿಧವಾಗಿ ವಿಭಾಗಿಸಿಕೊಂಡು[೧] ಈ ಶರೀರವನ್ನು ಎತ್ತಿಹಿಡಿದು ಧರಿಸಿರುತ್ತೇನೆ.' ಅವರು ಶ್ರದ್ಧೆಯಿಲ್ಲದವರಾದರು.

[೧ ಪ್ರಾಣಾದಿವೃತ್ತಿಭೇದದಿಂದ.]

**ಸೋಽಭಿಮಾನಾದೂರ್ಧ್ವಮುತ್ಕ್ರಮತ ಇವ ತಸ್ಮಿನ್ನುತ್ಕ್ರಾ-ಮತ್ಯಥೇತರೇ ಸರ್ವ ಏವೋತ್ಕ್ರಾಮಂತೇ, ತಸ್ಮಿಂಶ್ಚ ಪ್ರತಿಷ್ಠ-**

**ಮಾನೇ ಸರ್ವ ಏವ ಪ್ರಾತಿಷ್ಠಂತೇ । ತದ್ಯಥಾ ಮಕ್ಷಿಕಾ ಮಧುಕರ-ರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಾಮಂತೇ, ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರಾತಿಷ್ಠಂತ ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ; ತೇ ಪ್ರೀತಾಃ ಪ್ರಾಣಂ ಸ್ತುನ್ವಂತಿ　　॥ ೪ ॥**

ಸಃ=ಅವನು, ಮುಖ್ಯಪ್ರಾಣನು **ಅಭಿಮಾನಾತ್**= ರೋಷದಿಂದ **ಊರ್ಧ್ವಂ**= ಮೇಲಕ್ಕೆ **ಉತ್ಕ್ರಾಮತೇ ಇವ**=ಎದ್ದಂತೆ ಮಾಡಿದನು; **ತಸ್ಮಿನ್ ಉತ್ಕ್ರಾಮತಿ**= ಅವನು ಮೇಲಕ್ಕೆ ಎದ್ದಾಗ **ಅಥ**= ಕೂಡಲೇ **ಇತರೇ ಸರ್ವೇ ಏವ** = ಇತರರೆಲ್ಲರೂ **ಉತ್ಕ್ರಾಮಂತೇ** = ಎದ್ದರು, **ಚ** = ಮತ್ತು **ತಸ್ಮಿನ್ ಪ್ರತಿಷ್ಠಮಾನೇ** = ಅವನು ನಿಲ್ಲಲು **ಸರ್ವೇ ಏವ** = ಎಲ್ಲರೂ **ಪ್ರಾತಿಷ್ಠಂತೇ** = ನಿಂತರು **ತತ್ ಯಥಾ** = ಹೇಗೆ **ಉತ್ಕ್ರಾಮಂತಂ** = ಏಳುತ್ತಿರುವ **ಮಧುಕರರಾಜಾನಂ** [ಪ್ರತಿ]=ಜೇನುಹುಳುಗಳ ರಾಜನನ್ನು [ಅನುಸರಿಸಿ] **ಸರ್ವಾಃ ಏವ ಮಕ್ಷಿಕಾಃ** = ಎಲ್ಲ ಜೇನುಹುಳುಗಳು **ಉತ್ಕ್ರಾಮಂತೇ** = ಏಳುವುವೊ, **ಚ** = ಮತ್ತು **ತಸ್ಮಿನ್ ಪ್ರತಿಷ್ಠಮಾನೇ** = ಅವನು ನಿಲ್ಲಲು **ಸರ್ವಾಃ ಏವ** – ಎಲ್ಲವೂ **ಪ್ರಾತಿಷ್ಠಂತೇ** = ನಿಲ್ಲುವುವೊ, **ಏವಂ** = ಹಾಗೆ **ವಾಕ್ ಮನಃ ಚಕ್ಷುಃ ಶ್ರೋತ್ರಂ ಚ** = ವಾಕ್ಕು ಮನಸ್ಸು ಕಣ್ಣು ಮತ್ತು ಕಿವಿ [ಇವರು ಮಾಡಿದರು]. **ತೇ** = ಇವರು **ಪ್ರೀತಾಃ** = ಪ್ರೀತರಾಗಿ **ಪ್ರಾಣಂ** = ಪ್ರಾಣನನ್ನು **ಸ್ತುನ್ವಂತಿ** = ಸ್ತುತಿಸುತ್ತಾರೆ.

೪. ಮುಖ್ಯಪ್ರಾಣನು ರೋಷದಿಂದ ಮೇಲಕ್ಕೆದ್ದಂತೆ ಮಾಡಿದನು; ಅವನು ಮೇಲಕ್ಕೆದ್ದ ಕೂಡಲೇ ಇತರರೆಲ್ಲರೂ ಎದ್ದರು, ಮತ್ತು ಅವನು ನಿಲ್ಲಲು ಎಲ್ಲರೂ ನಿಂತರು. ತಮ್ಮ ರಾಜನು ಮೇಲಕ್ಕೆದ್ದಾಗ ಎಲ್ಲ ಜೇನು ಹುಳುಗಳು ಮೇಲಕ್ಕೇಳುವಂತೆ ಮತ್ತು ಅವನು ನಿಂತಾಗ ಎಲ್ಲವೂ ನಿಲ್ಲುವಂತೆ, ವಾಕ್ಕು ಮನಸ್ಸು ಕಣ್ಣು ಮತ್ತು ಕಿವಿ (ಇವರು[೧] ಮಾಡಿದರು). ಇವರು[೨] ಪ್ರೀತರಾಗಿ ಪ್ರಾಣನನ್ನು ಸ್ತುತಿಸಿದರು:

[[೧] ಇಲ್ಲಿ ವಾಗಾದಿ ಇಂದ್ರಿಯಗಳನ್ನೇ ಚೇತನವುಳ್ಳವರಂತೆ ಭಾವಿಸಿರುವುದರಿಂದ ಪುಲ್ಲಿಂಗ ಪ್ರಯೋಗ.
[೨] ಅಶ್ರದ್ಧೆಯನ್ನು ಬಿಟ್ಟು ಪ್ರಾಣನ ಮಹಿಮೆಯನ್ನು ಅರಿತುಕೊಂಡು.]

**ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘ-ವಾನೇಷ ವಾಯುಃ । ಏಷ ಪೃಥಿವೀ ರಯಿರ್ದೇವಃ ಸದಸಚ್ಚಾ-ಮೃತಂ ಚ ಯತ್　　॥ ೫ ॥**

ಏಷಃ = ಇವನು ಅಗ್ನಿಃ [ಸನ್] = ಅಗ್ನಿಯಾಗಿ ತಪತಿ = ಜ್ವಲಿಸುತ್ತಾನೆ, **ಏಷಃ ಸೂರ್ಯಃ** = ಇವನು ಸೂರ್ಯನು, **ಏಷಃ ಪರ್ಜನ್ಯಃ** = ಇವನು ಪರ್ಜನ್ಯನು, [ಏಷಃ] ಮಘವಾನ್=ಇವನು ಇಂದ್ರನು, ಏಷಃ **ವಾಯುಃ**=ಇವನು ವಾಯುವು, **ಏಷಃ** = ಇವನು **ಪೃಥಿವೀ** = ಪೃಥಿವಿ, **ರಯಿಃ** = ರಯಿ, **ದೇವಃ** = ದೇವನು, **ಸತ್ ಅಸತ್ ಚ** = ಸತ್ ಮತ್ತು ಅಸತ್ = ಮೂರ್ತ ಮತ್ತು ಅಮೂರ್ತ, **ಅಮೃತಂ ಚ ಯತ್** = ಮತ್ತು ಅಮೃತವು ಯಾವುದೊ [ಅದು].

**೫.** ಇವನು (ಪ್ರಾಣನು) ಅಗ್ನಿಯಾಗಿ ಜ್ವಲಿಸುತ್ತಾನೆ; ಇವನು ಸೂರ್ಯನು,[೧] ಇವನು ಪರ್ಜನ್ಯನು,[೨] (ಇವನು) ಇಂದ್ರನು,[೩] ಇವನು ವಾಯು;[೪] ಇವನು ಪೃಥಿವಿ, ರಯಿ, ದೇವ,[೫] ಮೂರ್ತ ಅಮೂರ್ತ ಮತ್ತು ಅಮೃತ.[೬]

[೧ ಸೂರ್ಯನಾಗಿ ಪ್ರಕಾಶಿಸುತ್ತಾನೆ.
೨ ಪರ್ಜನ್ಯನಾಗಿ ವರ್ಷಿಸುತ್ತಾನೆ
೩ ಇಂದ್ರನಾಗಿ ಪ್ರಜೆಗಳನ್ನು ಪಾಲಿಸುತ್ತಾನೆ ಮತ್ತು ಅಸುರರನ್ನು ನಾಶಮಾಡುತ್ತಾನೆ.
೪ ಆವಹ-ಪ್ರವಹಾದಿ-ಭೇದದಿಂದ ಬೀಸುತ್ತಾನೆ.
೫ ಸರ್ವಜಗತ್ತಿಗೂ ದೇವನು.
೬ ದೇವತೆಗಳ ಸ್ಥಿತಿಗೆ ಕಾರಣವಾದ.]

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್ ।
ಋಚೋ ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥ ೬ ॥**

**ರಥನಾಭೌ** = ರಥಚಕ್ರದ ಗುಂಬದಲ್ಲಿ **ಅರಾಃ ಇವ** = ಆರೆಕಾಲುಗಳಂತೆ **ಸರ್ವಂ** = ಎಲ್ಲವೂ **ಪ್ರಾಣೇ** = ಪ್ರಾಣನಲ್ಲಿ **ಪ್ರತಿಷ್ಠಿತಂ** = ಪ್ರತಿಷ್ಠಿತವಾಗಿರುವುದು; **ಋಚಃ** = ಋಕ್ಕುಗಳು, **ಯಜೂಂಷಿ** = ಯಜುಸ್ಸುಗಳು, **ಸಾಮಾನಿ** = ಸಾಮಗಳು, **ಯಜ್ಞಃ** = ಯಜ್ಞವು **ಕ್ಷತ್ರಂ ಬ್ರಹ್ಮ ಚ** = ಕ್ಷತ್ರಿಯ ಮತ್ತು ಬ್ರಾಹ್ಮಣ ಜಾತಿಗಳು [ಇವೆಲ್ಲವೂ ಪ್ರತಿಷ್ಠಿತವಾಗಿರುತ್ತವೆ]

**೬.** ರಥಚಕ್ರದ ಗುಂಬದಲ್ಲಿ ಆರೆಕಾಲುಗಳು ಸೇರಿಕೊಂಡಿರುವಂತೆ ಎಲ್ಲವೂ ಪ್ರಾಣನಲ್ಲಿ ಪ್ರತಿಷ್ಠಿತವಾಗಿರುವುದು; ಋಕ್ಕುಗಳು ಯಜುಸ್ಸುಗಳು ಸಾಮಗಳು, (ಇವುಗಳಿಂದ ಆಗುವ) ಯಜ್ಞ, (ಎಲ್ಲರನ್ನೂ ಕಾಪಾಡುವ) ಕ್ಷತ್ರಿಯ ಜಾತಿ ಮತ್ತು (ಯಜ್ಞಾದಿಕರ್ಮಗಳಿಗೆ ಅಧಿಕಾರಿಯಾದ) ಬ್ರಾಹ್ಮಣ ಜಾತಿ (ಇವೆಲ್ಲವೂ ಪ್ರಾಣನಲ್ಲಿ ಪ್ರತಿಷ್ಠಿತವಾಗಿರುತ್ತವೆ).

ಪ್ರಜಾಪತಿಶ್ಚರಸಿ ಗರ್ಭೇ
ತ್ವಮೇವ ಪ್ರತಿಜಾಯಸೇ ।
ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾ ಬಲಿಂ ಹರಂತಿ
ಯಃ ಪ್ರಾಣೈಃ ಪ್ರತಿತಿಷ್ಠಸಿ ॥ ೭ ॥

ತ್ವಂ ಏವ = ನೀನೇ ಪ್ರಜಾಪತಿಃ = ಪ್ರಜಾಪತಿಯಾಗಿ ಗರ್ಭೇ = ಗರ್ಭದಲ್ಲಿ ಚರಸಿ=ಸಂಚರಿಸುತ್ತೀಯೆ, ಪ್ರತಿಜಾಯಸೇ=[ತಂದೆತಾಯಿಗಳ ರೂಪದಲ್ಲಿ] ಹುಟ್ಟುತ್ತೀಯೆ. ಪ್ರಾಣ = ಹೇ ಪ್ರಾಣನೆ, ಯಃ [ತ್ವಂ] = ಯಾವ ನೀನು ಪ್ರಾಣೈಃ = ಪ್ರಾಣಗಳೊಂದಿಗೆ ಪ್ರತಿತಿಷ್ಠಸಿ = [ಪ್ರತಿಶರೀರದಲ್ಲೂ] ಇರುವೆಯೊ ತುಭ್ಯಂ ತು = ಆ ನಿನಗೆ ಇಮಾಃ ಪ್ರಜಾಃ = ಈ ಪ್ರಜೆಗಳು ಬಲಿಂ = ಕಾಣಿಕೆಯನ್ನು ಹರಂತಿ = ತಂದು ಒಪ್ಪಿಸುತ್ತಿರುವರು.

೭. ನೀನೇ ಪ್ರಜಾಪತಿಯಾಗಿ ಗರ್ಭದಲ್ಲಿ ಸಂಚರಿಸುತ್ತೀಯೆ, (ತಂದೆ ತಾಯಿಗಳ ರೂಪದಲ್ಲಿ) ನೀನೇ ಹುಟ್ಟುತ್ತೀಯೆ.[೧] ಹೇ ಪ್ರಾಣ, ಪ್ರಾಣಗಳೊಂದಿಗೆ[೨] ಇರುವ ನಿನಗೆ ಈ ಪ್ರಜೆಗಳು ಕಾಣಿಕೆಯನ್ನು[೩] ತಂದು ಒಪ್ಪಿಸುತ್ತಿರುವರು.[೪]

[[೧] ಎಲ್ಲ ದೇಹಗಳ ಮತ್ತು ಆತ್ಮಗಳ ಆಕೃತಿಯಿಂದ ಮರೆಯಾದ ಒಂದೇ ಪ್ರಾಣನು ಸರ್ವಾತ್ಮನಾಗಿರುವನು ಎಂದರ್ಥ.

[೨] ಚಕ್ಷುವೇ ಮೊದಲಾದ ಇಂದ್ರಿಯಗಳೊಂದಿಗೆ.

[೩] ಇಂದ್ರಿಯಗಳ ಮೂಲಕ.

[೪] ಆತ್ಮನೇ ಭೋಕ್ತೃ, ಮಿಕ್ಕವೆಲ್ಲವೂ ಭೋಜ್ಯ ಎಂದರ್ಥ.]

ದೇವನಾಮಸಿ ವಹ್ನಿತಮಃ ಪಿತೄಣಾಂ ಪ್ರಥಮಾ ಸ್ವಧಾ ।
ಋಷೀಣಾಂ ಚರಿತಂ ಸತ್ಯಮಥರ್ವಾಂಗಿರಸಾಮಸಿ ॥ ೮ ॥

ದೇವಾನಾಂ = ದೇವತೆಗಳಿಗೆ ವಹ್ನಿತಮಃ ಅಸಿ = ಹವಿಸ್ಸಿನ ಶ್ರೇಷ್ಠವಾಹಕನಾಗಿದ್ದೀಯೆ; ಪಿತೄಣಾಂ = ಪಿತೃಗಳಿಗೆ ಪ್ರಥಮಾ ಸ್ವಧಾ = ಪ್ರಥಮ ಸ್ವಧಾ ಪ್ರಾಪಕನಾಗಿದ್ದೀಯೆ; ಅಥರ್ವಾಂಗಿರಸಾಂ ಋಷೀಣಾಂ = ಅಂಗಿರಸರಾದ ಅಥರ್ವಋಷಿಗಳಿಗೆ ಎಂದರೆ ಚಕ್ಷುರಾದಿ ಪ್ರಾಣಗಳಿಗೆ ಸತ್ಯಂ ಚರಿತಂ ಅಸಿ = ಸತ್ಯವಾದ ಚರಿತವಾಗಿರುವೆ.

೮. (ಇಂದ್ರನೇ ಮೊದಲಾದ) ದೇವತೆಗಳಿಗೆ ಹವಿಸ್ಸನ್ನು ಕೊಡುವವರಲ್ಲಿ ಶ್ರೇಷ್ಠ ವಾಹಕನಾಗಿದ್ದೀಯೆ. ಪಿತೃಗಳಿಗೆ ಪ್ರಥಮ ಸ್ವಧಾ (ಪ್ರಾಪಕ

ನಾಗಿದ್ದೀಯೆ).[೧] ಅಂಗಿರಸರಾದ[೨] ಅಥರ್ವಋಷಿಗಳಿಗೆ ಎಂದರೆ ಚಕ್ಷುರಾದಿ ಪ್ರಾಣಗಳಿಗೆ ಸತ್ಯವಾದ ಚರಿತವಾಗಿರುವೆ.[೩]

[೧ ಯಜ್ಞಾದಿಕರ್ಮಗಳಲ್ಲಿ ಮೊದಲು ನಾಂದೀಮುಖಶ್ರಾದ್ಧವನ್ನು ಅವಶ್ಯವಾಗಿ ಮಾಡಬೇಕಾದುದರಿಂದ ಅದು 'ಪ್ರಥಮ'; ಈ ಶ್ರಾದ್ಧದಲ್ಲಿ ಕೊಡುವ ಅನ್ನಕ್ಕೆ ಸ್ವಧಾ ಎಂದು ಹೆಸರು.

೨ ಪ್ರಾಣನು ಅಂಗಗಳ ರಸ ಅಥವಾ ಸಾರವು ಆಗಿರುವುದರಿಂದ ಅಂಗಿರಸ (ಬೃ. ಉ ೧, ೩, ೧೯). 'ಪ್ರಾಣೋ ವಾಥರ್ವಾ' ಎಂದು ಇನ್ನೊಂದು ಶ್ರುತಿಯ ವಚನವೂ ಉಂಟು.

೩ ದೇಹಧಾರಣೆಯೇ ಮೊದಲಾದ ಕಾರ್ಯ.]

**ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ ।**
**ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥ ೯ ॥**

**ಪ್ರಾಣ** = ಹೇ ಪ್ರಾಣನೆ, **ತ್ವಂ**=ನೀನು **ಇಂದ್ರಃ** = ಪರಮೇಶ್ವರನು, **ತೇಜಸಾ** = ವೀರ್ಯದಿಂದ **ರುದ್ರಃ ಅಸಿ** = ರುದ್ರನಾಗಿರುವೆ, **ಪರಿರಕ್ಷಿತಾ** = ರಕ್ಷಕನು **ತ್ವಂ** = ನೀನು **ಸೂರ್ಯಃ** = ಸೂರ್ಯನಾಗಿ **ಅಂತರಿಕ್ಷೇ** = ಅಂತರಿಕ್ಷದಲ್ಲಿ **ಚರಸಿ** = ಸಂಚರಿಸುತ್ತೀಯೆ, **ತ್ವಂ [ಏವ]** = ನೀನೇ **ಜ್ಯೋತಿಷಾಂ** = ಜ್ಯೋತಿಗಳಿಗೆ **ಪತಿಃ** = ಒಡೆಯನು.

೯. ಹೇ ಪ್ರಾಣ, ನೀನು ಪರಮೇಶ್ವರನು, ವೀರ್ಯದಿಂದ ರುದ್ರನಾಗಿರುವೆ; (ಸ್ಥಿತಿಕಾಲದಲ್ಲಿ ಸೌಮ್ಯರೂಪದಿಂದ ನೀನು) ರಕ್ಷಕನಾಗಿರುವೆ. ನೀನು ಸೂರ್ಯನಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಿರುವೆ. ನೀನೇ ಜ್ಯೋತಿಗಳಿಗೆ ಒಡೆಯನು.

**ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣತೇ ಪ್ರಜಾಃ ।**
**ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ ॥ ೧೦ ॥**

**ಯದಾ** = ಯಾವಾಗ **ತ್ವಂ** = ನೀನು **ಅಭಿವರ್ಷಸಿ** = ಮಳೆಗರೆಯುತ್ತೀಯೊ **ಅಥ** = ಆಗ **ಇಮಾಃ ಪ್ರಜಾಃ** = ಈ ಪ್ರಜೆಗಳು **ಪ್ರಾಣತೇ** = ಬದುಕಿರುತ್ತಾರೆ. **ಕಾಮಾಯ** = ಯಥೇಷ್ಟವಾಗಿ **ಅನ್ನಂ** = ಅನ್ನವು **ಭವಿಷ್ಯತಿ** = ಆಗುವುದು **ಇತಿ** = ಎಂದು **ಆನಂದರೂಪಾಃ** = ಆನಂದರೂಪರಾಗಿ **ತಿಷ್ಠಂತಿ** = ಇರುತ್ತಾರೆ.

೧೦. ಯಾವಾಗ ನೀನು (ಪರ್ಜನ್ಯನಾಗಿ) ಮಳೆಗರೆಯುತ್ತೀಯೊ ಆಗ ಈ ಪ್ರಜೆಗಳು ಬದುಕಿರುತ್ತಾರೆ. 'ಯಥೇಷ್ಟವಾಗಿ ಅನ್ನವಾಗುವುದು' ಎಂದು ಆನಂದರೂಪರಾಗಿ ಇರುತ್ತಾರೆ.

**ವ್ರಾತ್ಯಸ್ತ್ವಂ ಪ್ರಾಣೈಕಋಷಿರತ್ತಾ ವಿಶ್ವಸ್ಯ ಸತ್ಪತಿಃ ।**
**ವಯಮಾದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವ ನಃ　　॥ ೧೧ ॥**

**ಪ್ರಾಣ** = ಹೇ ಪ್ರಾಣನೆ, **ತ್ವಂ** = ನೀನು **ವ್ರಾತ್ಯಃ** = ವ್ರಾತ್ಯನು **ಏಕರ್ಷಿಃ** = ಏಕರ್ಷಿಯಾದ **ಅತ್ತಾ** = ಅತ್ತೃ, **ವಿಶ್ವಸ್ಯ** = ವಿಶ್ವಕ್ಕೆ **ಸತ್ಪತಿಃ** = ಸತ್ಪತಿಯು; **ವಯಂ** = ನಾವು **ಆದ್ಯಸ್ಯ** = ಹವಿಸ್ಸಿನ **ದಾತಾರಃ** = ದಾತೃಗಳು. **ಮಾತರಿಶ್ವ** = ಹೇ ಮಾತರಿಶ್ವನೆ, **ತ್ವಂ** = ನೀನು **ನಃ** = ನಮ್ಮ **ಪಿತಾ** = ತಂದೆ

**೧೧.** ಹೇ ಪ್ರಾಣ, ನೀನು ವ್ರಾತ್ಯನು,[1] ಏಕರ್ಷಿಯೆಂಬ (ಹೆಸರಿನ ಅಗ್ನಿಯಾಗಿ ಎಲ್ಲ ಹವಿಸ್ಸುಗಳನ್ನು) ಭುಜಿಸುವವನು, ವಿಶ್ವಕ್ಕೆ ಸತ್ಪತಿಯು;[2] ನಾವು ಹವಿಸ್ಸನ್ನು ಕೊಡುವವರು. ಹೇ ಮಾತರಿಶ್ವ,[3] ನೀನು ನಮ್ಮ ತಂದೆ.

[[1] ಸಂಸ್ಕಾರವಿಲ್ಲದವನು ವ್ರಾತ್ಯನು ಇವನು ಮೊದಲನೇ ಹುಟ್ಟಿದುದರಿಂದ ಸಂಸ್ಕಾರವನ್ನು ಮಾಡುವವರು ಯಾರೂ ಇರಲಿಲ್ಲ.

[2] ಇರುವವುಗಳ ಪತಿ ಅಥವಾ ಸಾಧುವಾದ ಪತಿ (ಸತಃ ವಿದ್ಯಮಾನಸ್ಯ ಪತಿಃ ಸತ್ಪತಿಃ, ಸಾಧುರ್ವಾ ಪತಿಃ ಸತ್ಪತಿಃ)

[3] ಮಾತರಿಶ್ವನಃ ಎಂಬ ಪಾಠವನ್ನು ತೆಗೆದುಕೊಂಡರೆ, ವಾಯುವಿಗೆ ನೀನು ತಂದೆ ಎಂದು ಅರ್ಥವಾಗುತ್ತದೆ.]

**ಯಾ ತೇ ತನೂರ್ವಾಚಿ ಪ್ರತಿಷ್ಠಿತಾ**
**　　ಯಾ ಶ್ರೋತ್ರೇ ಯಾ ಚ ಚಕ್ಷುಷಿ ।**
**ಯಾ ಚ ಮನಸಿ ಸಂತತಾ**
**　　ಶಿವಾಂ ತಾಂ ಕುರು ಮೋತ್ಕ್ರಮೀಃ　　॥ ೧೨ ॥**

**ತೇ** = ನಿನ್ನ **ಯಾ** = ಯಾವ **ತನೂಃ** = ಶರೀರವು **ವಾಚಿ** = ವಾಕ್ಕಿನಲ್ಲಿ **ಪ್ರತಿಷ್ಠಿತಾ** = ಪ್ರತಿಷ್ಠಿತವಾಗಿರುವುದೊ, **ಯಾ ಶ್ರೋತ್ರೇ** = ಯಾವುದು ಶ್ರೋತ್ರದಲ್ಲಿರುವುದೊ, **ಯಾ ಚ ಚಕ್ಷುಷಿ** = ಯಾವುದು ಚಕ್ಷುಸ್ಸಿನಲ್ಲಿರುವುದೊ, **ಯಾ ಚ ಮನಸಿ** = ಯಾವುದು ಮನಸ್ಸಿನಲ್ಲಿ **ಸಂತತಾ** = ಸಂತತವಾಗಿರುವುದೊ, **ತಾಂ** = ಅದನ್ನು **ಶಿವಾಂ ಕುರು**=ಶಾಂತವಾಗಿ ಮಾಡು, **ಮಾ ಉತ್ಕ್ರಮೀಃ**=ಹೋಗಬೇಡ.

**೧೨.** ನಿನ್ನ ಯಾವ ರೂಪವು ವಾಕ್ಕು ಶ್ರೋತ್ರ ಚಕ್ಷು—ಇವುಗಳಲ್ಲಿರುವುದೊ[1] ಮತ್ತು ಮನಸ್ಸಿನಲ್ಲಿ[2] ಸಂತತವಾಗಿರುವುದೊ ಅದನ್ನು ಶಾಂತವಾಗಿ ಮಾಡು, ಹೋಗಬೇಡ.[3]

[[೧] ವಕ್ತೃವಾಗಿ ಮಾತನಾಡುವ ಕ್ರಿಯೆಯನ್ನು ಮಾಡುವುದೊ; ಹೀಗೆಯೇ ಇತರ ಇಂದ್ರಿಯಗಳಲ್ಲಿಯೂ.

[೨] ಸಂಕಲ್ಪಾದಿವ್ಯಾಪಾರದಿಂದ ಕೂಡಿ.

[೩] ಮುಖ್ಯಪ್ರಾಣನು ಹೊರಟು ಹೋದರೆ ಉಳಿದ ಎಲ್ಲ ಇಂದ್ರಿಯಗಳು ಅಮಂಗಳವಾಗುವುವು.]

**ಪ್ರಾಣಸ್ಯೇದಂ ವಶೇ ಸರ್ವಂ**
**ತ್ರಿದಿವೇ ಯತ್ ಪ್ರತಿಷ್ಠಿತಮ್ ।**
**ಮಾತೇವ ಪುತ್ರಾನ್ ರಕ್ಷಸ್ವ**
**ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥ ೧೩ ॥**

**ಇದಂ ಸರ್ವಂ** = ಇದೆಲ್ಲವೂ **ಪ್ರಾಣಸ್ಯ** = ಪ್ರಾಣದ **ವಶೇ** = ವಶದಲ್ಲಿರುವುದು. **ಯತ್** = ಯಾವುದು **ತ್ರಿದಿವೇ** = ದ್ಯುಲೋಕದಲ್ಲಿ **ಪ್ರತಿಷ್ಠಿತಂ** = ಪ್ರತಿಷ್ಠಿತವಾಗಿರುವುದೊ [ಅದೂ ಪ್ರಾಣನ ವಶದಲ್ಲಿಯೇ ಇರುವುದು]. **ಮಾತಾ** = ತಾಯಿಯು **ಪುತ್ರಾನ್ ಇವ** = ಮಕ್ಕಳನ್ನು ರಕ್ಷಿಸುವಂತೆ **ರಕ್ಷಸ್ವ** = ರಕ್ಷಿಸು. **ಶ್ರೀಃ [ಶ್ರಿಯಃ] ಚ** = ಶ್ರೀಗಳನ್ನೂ **ಪ್ರಜ್ಞಾಂ ಚ** = ಪ್ರಜ್ಞೆಯನ್ನೂ **ನಃ** = ನಮಗೆ **ವಿಧೇಹಿ** = ಕೊಡು **ಇತಿ** = ಎಂದು

೧೩. ಇದೆಲ್ಲವೂ[೧] ಪ್ರಾಣನ ವಶದಲ್ಲಿ ಇರುವುದು. ಯಾವುದು[೨] ದ್ಯುಲೋಕದಲ್ಲಿ ಪ್ರತಿಷ್ಠಿತವಾಗಿರುವುದೊ (ಅದೂ ಪ್ರಾಣನ ವಶದಲ್ಲಿಯೇ ಇರುವುದು). ತಾಯಿಯು ಮಕ್ಕಳನ್ನು ರಕ್ಷಿಸುವಂತೆ (ನಮ್ಮನ್ನು) ರಕ್ಷಿಸು. ಶ್ರೀಗಳನ್ನೂ ಮತ್ತು ಪ್ರಜ್ಞೆಗಳನ್ನೂ ನಮಗೆ ಕೊಡು.[೩]

[[೧] ಸಮಸ್ತ ಭೋಗಸಮೂಹ

[೨] ದೇವತೆಗಳ ಉಪಭೋಗಕ್ಕೆ ಏನೇನಿರುವುದೊ.

[೩] ವಾಗಾದಿ ಇಂದ್ರಿಯಗಳ ಸ್ತುತಿಯಿಂದ ಸರ್ವಾತ್ಮನೆಂದು ಮಹಿಮೆಯನ್ನು ಹೊಂದಿದ ಪ್ರಾಣನೇ ಪ್ರಜಾಪತಿಯು ಅಥವಾ ಅತ್ತೃವು ಎಂದು ನಿರ್ಧರಿಸಿದ್ದಾಯಿತು.]

# ಮೂರನೆಯ ಪ್ರಶ್ನೆ

**ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ । ಭಗವನ್ ಕುತ ಏಷ ಪ್ರಾಣೋ ಜಾಯತೇ, ಕಥಮಾಯಾತ್ಯಸ್ಮಿಞ್ಶರೀರ ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರಾತಿಷ್ಠತೇ, ಕೇನೋತ್ಕ್ರಮತೇ ಕಥಂ ಬಾಹ್ಯಮಭಿಧತ್ತೇ, ಕಥಮಧ್ಯಾತ್ಮಮಿತಿ ॥ ೧ ॥**

**ಅಥ ಹ**=ಅನಂತರ **ಕೌಸಲ್ಯಃ ಚ ಆಶ್ವಲಾಯನಃ** = ಕೌಸಲ್ಯ ಆಶ್ವಲಾಯನನು **ಏನಂ** = ಇವನನ್ನು **ಪಪ್ರಚ್ಛ** = ಪ್ರಶ್ನಿಸಿದನು· **ಭಗವನ್** = ಹೇ ಭಗವಂತನೆ, **ಏಷಃ ಪ್ರಾಣಃ** = ಈ ಪ್ರಾಣನು **ಕುತಃ** = ಯಾವುದರಿಂದ **ಜಾಯತೇ** = ಹುಟ್ಟುವನು? **ಕಥಂ** = ಹೇಗೆ **ಅಸ್ಮಿನ್** = ಈ **ಶರೀರೇ** = ಶರೀರದಲ್ಲಿ **ಆಯಾತಿ** = ಬರುವನು? **ಕಥಂ ವಾ** = ಹೇಗೆ **ಆತ್ಮಾನಂ** = ತನ್ನನ್ನು **ಪ್ರವಿಭಜ್ಯ** = ವಿಭಾಗಿಸಿಕೊಂಡು **ಪ್ರಾತಿಷ್ಠತೇ**=ಇರುವನು? **ಕೇನ** = ಯಾವುದರಿಂದ **ಉತ್ಕ್ರಮತೇ** = ಉತ್ಕ್ರಮಿಸುವನು? **ಕಥಂ** = ಹೇಗೆ **ಬಾಹ್ಯಂ** = ಬಾಹ್ಯ[ಜಗತ್ತನ್ನು] **ಅಭಿಧತ್ತೇ** = ಧರಿಸಿರುವನು? **ಕಥಂ ಅಧ್ಯಾತ್ಮಂ** = ಹೇಗೆ ಒಳಗಿರುವುದನ್ನು [ಧರಿಸಿರುವನು]? **ಇತಿ** = ಎಂದು.

೧. ಅನಂತರ ಕೌಸಲ್ಯ ಆಶ್ವಲಾಯನನು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಈ ಪ್ರಾಣನು ಯಾವುದರಿಂದ[೧] ಹುಟ್ಟುವನು? ಈ ಶರೀರಕ್ಕೆ ಹೇಗೆ[೨] ಬರುವನು? ತನ್ನನ್ನು ವಿಭಾಗಿಸಿಕೊಂಡು ಹೇಗೆ ಇರುವನು? ಯಾವುದರಿಂದ[೩] ಉತ್ಕ್ರಮಿಸುವನು? ಬಾಹ್ಯಜಗತ್ತನ್ನು[೪] ಹೇಗೆ ಧರಿಸಿರುವನು? ಒಳಗಿರುವುದನ್ನು[೫] ಹೇಗೆ (ಧರಿಸಿರುವನು)?

[ಹಿಂದಿನ ಪ್ರಶ್ನೆಯಲ್ಲಿ ಪ್ರಾಣನ ಸ್ವರೂಪವನ್ನು ನಿಶ್ಚಯಿಸಿ, ಅವನ ಮಹಿಮೆಯನ್ನು ತಿಳಿದುಕೊಂಡರೂ ಅವನನ್ನು ಪರಮತತ್ತ್ವವೆಂದು ಹೇಳಲಾಗುವುದಿಲ್ಲ; ಏಕೆಂದರೆ ಅವನು ಇತರ ವಸ್ತುಗಳೊಂದಿಗೆ ಸೇರಿಕೊಂಡು ಕಾರ್ಯನಾಗಿದ್ದಾನೆ. ಇದನ್ನು ನಿರ್ಧರಿಸಲು ಈ ಪ್ರಶ್ನೆಬಂದಿದೆ.

೧ ಯಾವ ಕಾರಣದಿಂದ.

೨ ಯಾವ ವೃತ್ತಿವಿಶೇಷದಿಂದ? ಇವನ ಶರೀರಗ್ರಹಣಕ್ಕೆ ಏನು ಕಾರಣ ಎಂದರ್ಥ.

೩ ಯಾವ ವೃತ್ತಿವಿಶೇಷದಿಂದ?

೪ ಬಾಹ್ಯಜಗತ್ತು ಎರಡು ವಿಧ— ಅಧಿಭೂತ ಮತ್ತು ಅಧಿದೈವತ.

೫ ಮನಸ್ಸು ಇಂದ್ರಿಯ ಮೊದಲಾದುವು.]

**ತಸ್ಮೈ ಸ ಹೋವಾಚಾತಿಪ್ರಶ್ನಾನ್ ಪೃಚ್ಛಸಿ ಬ್ರಹ್ಮಿಷ್ಠೋಽಸೀತಿ, ತಸ್ಮಾತ್ತೇಽಹಂ ಬ್ರವೀಮಿ ॥ ೨ ॥**

**ಸಃ** = ಅವನು [ಪಿಪ್ಪಲಾದನು] **ತಸ್ಮೈ** = ಅವನಿಗೆ **ಉವಾಚ ಹ**=ಹೇಳಿದನು: **ಅತಿಪ್ರಶ್ನಾನ್** = ಅತಿಪ್ರಶ್ನೆಗಳನ್ನು **ಪೃಚ್ಛಸಿ** = ಕೇಳುತ್ತಿರುವೆ; **ಬ್ರಹ್ಮಿಷ್ಠಃ ಅಸಿ** = ಅತಿಶಯವಾಗಿ ಬ್ರಹ್ಮವನ್ನು ತಿಳಿದಿರುವೆ **ಇತಿ** = ಎಂದು **ತಸ್ಮಾತ್** = ಆದುದರಿಂದ **ಅಹಂ** = ನಾನು **ತೇ** = ನಿನಗೆ **ಬ್ರವೀಮಿ** = ಹೇಳುತ್ತೇನೆ.

**೨.** ಪಿಪ್ಪಲಾದನು ಅವನಿಗೆ ಹೇಳಿದನು: ನೀನು ಅತಿಪ್ರಶ್ನೆಗಳನ್ನು[1] ಕೇಳುತ್ತಿರುವೆ. ನೀನು ಅತಿಶಯವಾಗಿ ಬ್ರಹ್ಮವನ್ನು ತಿಳಿದಿರುವೆ;[2] ಆದುದರಿಂದ ನಾನು ನಿನಗೆ ಹೇಳುತ್ತೇನೆ.

[[1] ಸೂಕ್ಷ್ಮ ಪ್ರಶ್ನೆಗಳನ್ನು.
[2] ಶಿಷ್ಯನ ಪ್ರೋತ್ಸಾಹಕ್ಕಾಗಿ ಹೀಗೆ ಪಿಪ್ಪಲಾದನು ಹೇಳುತ್ತಾನೆ.]

**ಆತ್ಮನ ಏಷ ಪ್ರಾಣೋ ಜಾಯತೇ । ಯಥೈಷಾ ಪುರುಷೇ ಛಾಯೈತಸ್ಮಿನ್ನೇತದಾತತಂ ಮನೋಕೃತೇನಾಯಾತ್ಯಸ್ಮಿಞ್ಶರೀರೇ ॥ ೩ ॥**

**ಏಷಃ ಪ್ರಾಣಃ** = ಈ ಪ್ರಾಣನು **ಆತ್ಮನಃ** = ಆತ್ಮನಿಂದ **ಜಾಯತೇ** = ಹುಟ್ಟುತ್ತಾನೆ **ಯಥಾ** = ಹೇಗೆ **ಪುರುಷೇ** = ಪುರುಷ ದೇಹದಲ್ಲಿ ಎಂದರೆ ದೇಹವನ್ನು ಅವಲಂಬಿಸಿ **ಏಷಾ** = ಈ **ಛಾಯಾ** = ನೆರಳು [**ಜಾಯತೇ** = ಉಂಟಾಗುವುದೊ **ತದ್ವತ್** = ಹಾಗೆಯೇ] **ಏತಸ್ಮಿನ್** = ಇವನಲ್ಲಿ, ಸತ್ಯಪುರುಷನಲ್ಲಿ **ಏತತ್** = ಇದು, ಪ್ರಾಣವು **ಆತತಂ** = ಸಮರ್ಪಿತವಾಗಿದೆ, **ಮನೋಕೃತೇನ** = ಮನಸ್ಸಿನ ಸಂಕಲ್ಪಾದಿ ಕರ್ಮದಿಂದ **ಅಸ್ಮಿನ್ ಶರೀರೇ** = ಈ ಶರೀರದಲ್ಲಿ **ಆಯಾತಿ** = ಬರುತ್ತದೆ

**೩.** ಈ ಪ್ರಾಣನು ಆತ್ಮನಿಂದ[1] ಹುಟ್ಟುತ್ತಾನೆ. ಈ ನೆರಳು ಪುರುಷನ ಶರೀರವನ್ನು ಅವಲಂಬಿಸಿ ಹೇಗೆ ಇರುತ್ತದೆಯೊ ಹಾಗೆಯೇ ಈ ಪ್ರಾಣನು[2] ಸತ್ಯಪುರುಷನಲ್ಲಿ ಸಮರ್ಪಿತನಾಗಿರುವನು (ಮತ್ತು ನೆರಳಿನಂತೆ) ಮನಸ್ಸಿನ ಸಂಕಲ್ಪಾದಿ ಕರ್ಮದಿಂದ ಈ ಶರೀರಕ್ಕೆ ಬರುತ್ತಾನೆ.[3]

[[1] ಅಕ್ಷರನೂ ಸತ್ಯನೂ ಆದ ಪರಮಪುರುಷ.
[2] ವಸ್ತುವನ್ನು ಅನುಸರಿಸುವ ನೆರಳು ಹೇಗೆ ಮಿಥ್ಯೆಯಾಗಿದೆಯೊ, ಹಾಗೆಯೇ ಬ್ರಹ್ಮದಲ್ಲಿ ಕಲ್ಪಿತವಾದ ಈ ಪ್ರಾಣವು ಮಿಥ್ಯೆ.
[3] ಪ್ರ. ಉ. ೩, ೭ ಮತ್ತು ಬೃ ಉ. ೪, ೪, ೬ ನೋಡಿ. ಮೂರನೆಯ ಪ್ರಶ್ನೆಯಲ್ಲಿ 'ಕಥಂ ಆಯಾತಿ?' ಎಂಬ ಭಾಗದ ಉತ್ತರ ಇದು.]

**ಯಥಾ ಸಮ್ರಾಡೇವಾಧಿಕೃತಾನ್ ವಿನಿಯುಂಕ್ತೇ । ಏತಾನ್ ಗ್ರಾಮಾನೇತಾನ್ ಗ್ರಾಮಾನಧಿತಿಷ್ಠಸ್ವೇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸಂನಿಧತ್ತೇ ॥ ೪ ॥**

ಯಥಾ = ಹೇಗೆ ಸಮ್ರಾಟ್ ಏವ = ರಾಜನೇ, ಏತಾನ್ = ಈ ಗ್ರಾಮಾನ್ = ಗ್ರಾಮಗಳನ್ನು ಅಧಿತಿಷ್ಠಸ್ವ = ಆಳು, ಏತಾನ್ ಗ್ರಾಮಾನ್ = ಈ ಗ್ರಾಮಗಳನ್ನು [ಆಳು] ಇತಿ = ಎಂದು, ಅಧಿಕೃತಾನ್ = ಅಧಿಕಾರಿಗಳನ್ನು ವಿನಿಯುಂಕ್ತೇ = ನಿಯೋಗಿಸುತ್ತಾನೆಯೊ ಏವಂ ಏವ = ಹಾಗೆಯೇ ಏಷಃ ಪ್ರಾಣಃ = ಈ ಪ್ರಾಣನು ಇತರಾನ್ ಪ್ರಾಣಾನ್ – ಇತರ ಪ್ರಾಣಗಳನ್ನು ಪೃಥಕ್ ಪೃಥಕ್ ಏವ = ಬೇರೆ ಬೇರೆಯಾಗಿಯೇ ಸಂನಿಧತ್ತೇ = ಇಡುತ್ತಾನೆ.

**೪.** ಹೇಗೆ ರಾಜನೇ 'ಈ ಗ್ರಾಮಗಳನ್ನು ಆಳು, ಈ ಗ್ರಾಮಗಳನ್ನು ಆಳು' ಎಂದು ಅಧಿಕಾರಿಗಳನ್ನು ನಿಯೋಗಿಸುತ್ತಾನೆಯೊ ಹಾಗೆಯೇ ಈ ಪ್ರಾಣನು ಉಳಿದ ಪ್ರಾಣಗಳನ್ನು ಬೇರೆಬೇರೆಯಾಗಿಯೇ ಇಡುತ್ತಾನೆ.[೧]

[[೧] ಪ್ರಾಣಾಪಾನಾದಿಗಳನ್ನು ಆಯಾ ಸ್ಥಾನಗಳಿಗೆ ಕಳುಹಿಸುತ್ತಾನೆ ಎಂದರ್ಥ ]

**ಪಾಯೂಪಸ್ಥೇಽಪಾನಂ; ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರಾತಿಷ್ಠತೇ ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ ॥ ೫ ॥**

ಪಾಯೂಪಸ್ಥೇ = ಪಾಯು ಉಪಸ್ಥ ಇವುಗಳಲ್ಲಿ ಅಪಾನಂ = ಅಪಾನವಾಯು **ಮುಖನಾಸಿಕಾಭ್ಯಾಂ** = ಮೂಗುಬಾಯಿಗಳಿಂದ [ಬರುತ್ತಿರುವ] **ಅಯಂ ಪ್ರಾಣಃ** = ಈ ಪ್ರಾಣನು **ಚಕ್ಷುಃಶ್ರೋತ್ರೇ** = ಕಣ್ಣುಕಿವಿಗಳಲ್ಲಿ **ಪ್ರಾತಿಷ್ಠತೇ** = ಪ್ರತಿಷ್ಠಿತನಾಗಿರುವನು. **ಮಧ್ಯೇ ತು** = ಮಧ್ಯದಲ್ಲಿ **ಸಮಾನಃ** = ಸಮಾನವಾಯು; **ಏಷಃ ಹಿ** = ಇವನೇ **ಏತತ್** = ಈ **ಹುತಂ** = ಹೋಮಮಾಡಿದ **ಅನ್ನಂ** = ಅನ್ನವನ್ನು **ಸಮಂ** = ಸಮವಾಗಿ **ನಯತಿ** = ತೆಗೆದುಕೊಂಡು ಹೋಗುತ್ತಾನೆ, ಹಂಚುತ್ತಾನೆ. **ತಸ್ಮಾತ್** = ಅದರಿಂದ **ಏತಾಃ** = ಈ **ಸಪ್ತ ಅರ್ಚಿಷಃ** = ಏಳು ಶಿಖೆಗಳು **ಭವಂತಿ** = ಉಂಟಾಗುತ್ತಿರುವುವು, ಹೊರಗೆ ಬರುತ್ತಿರುವುವು.

**೫.** ಪಾಯೂಪಸ್ಥಗಳಲ್ಲಿ[೧] ಅಪಾನವಾಯು, ಮೂಗುಬಾಯಿಗಳಿಂದ (ಬರುತ್ತಿರುವ) ಈ ಪ್ರಾಣನು ಕಣ್ಣುಕಿವಿಗಳಲ್ಲಿ ಪ್ರತಿಷ್ಠಿತನಾಗಿರುವನು. ಮಧ್ಯದಲ್ಲಿ[೨] ಸಮಾನವಾಯು; ಇವನೇ ಈ ಹೋಮಮಾಡಿದ[೩] ಈ ಅನ್ನವನ್ನು

ನಮವಾಗಿ ಹಂಚುತ್ತಾನೆ. ಅದರಿಂದ ಈ ಏಳು ಶಿಖೆಗಳು[೪] ಹೊರಗೆ ಬರುತ್ತಿರುವುವು.

[[೧] ಮೂತ್ರಪುರೀಷಗಳ ನಿರ್ಗಮನಕ್ಕಾಗಿ.

[೨] ಪ್ರಾಣಾಪಾನಗಳ ಮಧ್ಯದಲ್ಲಿ ಎಂದರೆ ನಾಭಿಯಲ್ಲಿ.

[೩] ಜಾಠರಾಗ್ನಿಗೆ ಸಮರ್ಪಿಸಿದ ಅನ್ನವೆಲ್ಲವೂ ಹೋಮ ಮಾಡಿದಂತೆಯೇ.

[೪] ಆಹಾರವೆಂಬ ಇಂಧನದಿಂದ ಉಂಟಾದ ಉದರಾಗ್ನಿಯು ಹೃದಯಪ್ರದೇಶವನ್ನು ಸೇರಿದರೆ ಏಳು ಅಗ್ನಿಶಿಖೆಗಳು (ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕಗಳು ಮತ್ತು ರಸನೇಂದ್ರಿಯ) ಶಿರದಲ್ಲಿರುವ ಪ್ರಾಣಗಳ ದ್ವಾರಾ ಹೊರಡುವುವು ಎಂದರೆ ದರ್ಶನ-ಶ್ರವಣಾದಿ-ಲಕ್ಷಣವಾದ ಜ್ಞಾನವುಂಟಾಗುವುದು.]

**ಹೃದಿ ಹ್ಯೇಷ ಆತ್ಮಾ। ಅತ್ರೈತದೇಕಶತಂ ನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯಾಂ ದ್ವಾಸಪ್ತತಿರ್ದ್ವಾಸಪ್ತತಿಃ ಪ್ರತಿಶಾಖಾ-ನಾಡೀಸಹಸ್ರಾಣಿ ಭವಂತ್ಯಾಸು ವ್ಯಾನಶ್ಚರತಿ ॥ ೬ ॥**

ಹೃದಿ ಹಿ = ಹೃದಯದಲ್ಲಿ ಏಷಃ ಆತ್ಮಾ = ಈ ಆತ್ಮನು [ವಾಸಿಸುತ್ತಾನೆ]. **ಅತ್ರ** = ಇಲ್ಲಿ **ನಾಡೀನಾಂ** = ನಾಡಿಗಳ **ಏತತ್ ಏಕಶತಂ** = ಈ ನೂರೊಂದು; **ತಾಸಾಂ**=ಅವುಗಳಲ್ಲಿ **ಏಕೈಕಸ್ಯಾಂ** = ಒಂದೊಂದರಲ್ಲಿ **ಶತಂ ಶತಂ** = ನೂರು ನೂರು; **ಪ್ರತಿಶಾಖಾನಾಡೀಸಹಸ್ರಾಣಿ ದ್ವಾಸಪ್ತತಿಃ ದ್ವಾಸಪ್ತತಿಃ** = ಒಂದೊಂದು ಶಾಖೆಯಲ್ಲಿಯೂ ಎಪ್ಪತ್ತೆರಡು ಎಪ್ಪತ್ತೆರಡು ಸಾವಿರ ನಾಡಿಗಳು **ಭವಂತಿ** = ಇರುವುವು. **ತಾಸು** = ಅವುಗಳಲ್ಲಿ **ವ್ಯಾನಃ** = ವ್ಯಾನವು **ಚರತಿ** = ಸಂಚರಿಸುತ್ತದೆ.

೬. ಈ ಆತ್ಮನು[೧] ಹೃದಯದಲ್ಲಿಯೇ (ವಾಸಿಸುವನು). ಇಲ್ಲಿ ನೂರೊಂದು ನಾಡಿಗಳು (ಇರುವುವು;) ಅವುಗಳ ಒಂದೊಂದರಲ್ಲಿ ನೂರು ನೂರು (ಇರುವುವು.) ಒಂದೊಂದು ಶಾಖೆಯಲ್ಲಿಯೂ ಎಪ್ಪತ್ತೆರಡು ಎಪ್ಪತ್ತೆರಡು ಸಾವಿರ ನಾಡಿಗಳು ಇರುವುವು. ಅವುಗಳಲ್ಲಿ ವ್ಯಾನವು[೨] ಸಂಚರಿಸುತ್ತದೆ.

[[೧] ಲಿಂಗಾತ್ಮ ಅಥವಾ ಜೀವಾತ್ಮ; ಲಿಂಗಶರೀರವು ಆತ್ಮನಿಗೆ ಉಪಾಧಿಯಾಗಿರುವುದರಿಂದ ಇವನನ್ನು ಆತ್ಮನೆಂದು ಹೇಳಿದೆ.

[೨] ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವುದರಿಂದ ಇದಕ್ಕೆ ವ್ಯಾನವೆಂದು ಹೆಸರು.]

**ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಮ್ ॥ ೭ ॥**

**ಅಥ** = ಈಗ **ಏಕಯಾ** = ಒಂದರಿಂದ **ಊರ್ಧ್ವಃ [ಸನ್]** = ಊರ್ಧ್ವಗಾಮಿಯಾಗಿ **ಉದಾನಃ** = ಉದಾನವಾಯುವು **ಪುಣ್ಯೇನ** = ಪುಣ್ಯದಿಂದ **ಪುಣ್ಯಂ** = ಪುಣ್ಯವಾದ **ಲೋಕಂ**=ಲೋಕಕ್ಕೆ **ನಯತಿ** = ಒಯ್ಯುತ್ತದೆ; **ಪಾಪೇನ** = ಪಾಪದಿಂದ **ಪಾಪಂ** = ನರಕಕ್ಕೂ, **ಉಭಾಭ್ಯಾಂ ಏವ** = ಪುಣ್ಯಪಾಪಗಳಿಂದಲೂ **ಮನುಷ್ಯಲೋಕಂ** = ಮನುಷ್ಯಲೋಕಕ್ಕೆ [**ನಯತಿ** = ಒಯ್ಯುತ್ತದೆ].

೭. ಈಗ ಒಂದರಿಂದ[೧] ಉದಾನವಾಯುವು ಊರ್ಧ್ವಗಾಮಿಯಾಗಿ ಪುಣ್ಯದಿಂದ[೨] ಪುಣ್ಯಲೋಕಕ್ಕೂ, ಪಾಪದಿಂದ[೩] ನರಕಕ್ಕೂ,[೪] ಪುಣ್ಯಪಾಪಗಳೆರಡರಿಂದ[೫] ಮನುಷ್ಯಲೋಕಕ್ಕೂ ಒಯ್ಯುತ್ತದೆ.

[[೧] ನೂರೊಂದು ನಾಡಿಗಳಲ್ಲಿ ಒಂದಾದ ಸುಷುಮ್ನಾ ಎಂಬ ನಾಡಿಯಿಂದ
[೨] ಶಾಸ್ತ್ರವಿಹಿತವಾದ ಕರ್ಮದಿಂದ.
[೩] ಶಾಸ್ತ್ರಕ್ಕೆ ವಿರುದ್ಧವಾಗಿರುವ ಕರ್ಮದಿಂದ.
[೪] ತಿರ್ಯಗ್ಯೋನಿಯೇ ಮೊದಲಾದ ಲಕ್ಷಣವುಳ್ಳ.
[೫] ಪುಣ್ಯಪಾಪಗಳೆರಡೂ ಸಮನಾಗಿರುವಾಗ]

**ಆದಿತ್ಯೋ ಹ ವೈ ಬಾಹ್ಯಃ ಪ್ರಾಣಃ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ । ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಾಂತರಾ ಯದಾಕಾಶಃ ಸ ಸಮಾನೋ ವಾಯುರ್ವ್ಯಾನಃ ॥ ೮ ॥**

**ಆದಿತ್ಯಃ ಹ ವೈ** = ಆದಿತ್ಯನೇ **ಬಾಹ್ಯಃ** = ಹೊರಗಿನ **ಪ್ರಾಣಃ** = ಪ್ರಾಣನು, **ಹಿ** = ಏಕೆಂದರೆ **ಏಷಃ** = ಇವನು **ಏನಂ** = ಈ **ಚಾಕ್ಷುಷಂ ಪ್ರಾಣಂ** = ಕಣ್ಣಿನಲ್ಲಿರುವ ಪ್ರಾಣವನ್ನು **ಅನುಗೃಹ್ಣಾನಃ** = ಅನುಗ್ರಹಿಸುತ್ತ **ಉದಯತಿ** = ಉದಯಿಸುತ್ತಾನೆ, **ಪೃಥಿವ್ಯಾಂ** = ಪೃಥಿವಿಯಲ್ಲಿ **ಯಾ ದೇವತಾ** = ಯಾವ ದೇವತೆ [ಇರುವುದೊ] **ಸಾ ಏಷಾ** = ಆ ಇದು **ಪುರುಷಸ್ಯ** = ಪುರುಷನ **ಅಪಾನಂ** = ಅಪಾನವನ್ನು **ಅವಷ್ಟಭ್ಯ** = ವಶಪಡಿಸಿಕೊಂಡು [ಇರುತ್ತದೆ]. **ಅಂತರಾ** = ಮಧ್ಯದಲ್ಲಿ **ಯತ್ ಆಕಾಶಃ**=ಯಾವ ಆಕಾಶವಿದೆಯೊ **ಸಃ ಸಮಾನಃ** = ಅದು ಸಮಾನವು. **ವಾಯುಃ**= ವಾಯುವು **ವ್ಯಾನಃ** = ವ್ಯಾನವು.

೮. ಆದಿತ್ಯನೇ (ಅಧಿದೈವತನಾದ) ಹೊರಗಿನ ಪ್ರಾಣನು. ಏಕೆಂದರೆ ಇವನು ಕಣ್ಣಿನಲ್ಲಿರುವ ಈ ಪ್ರಾಣನನ್ನು ಅನುಗ್ರಹಿಸುತ್ತ[೧] ಉದಯಿಸುತ್ತಾನೆ. ಪೃಥಿವಿಯಲ್ಲಿರುವ ದೇವತೆಯೇ[೨] ಪುರುಷನ ಅಪಾನವನ್ನು ವಶಪಡಿಸಿಕೊಂಡು

(ಇರುತ್ತದೆ). ಮಧ್ಯದಲ್ಲಿರುವ ಆಕಾಶವೇ[3] ಸಮಾನವು.[4] (ಸಾಮಾನ್ಯವಾಗಿ ಹೊರಗಿರುವ) ವಾಯುವು ವ್ಯಾನವು.

[[1] ರೂಪವನ್ನು ನೋಡಲು ಬೆಳಕನ್ನು ಉಂಟುಮಾಡುತ್ತ.

[2] ಪೃಥಿವಿಗೆ ಅಭಿಮಾನ ದೇವತೆಯಾದ ಅಗ್ನಿ, ಬೃ ಉ. ೩, ೯, ೧೦ ನೋಡಿ. ವಸ್ತುವನ್ನು ಭೂಕೇಂದ್ರದ ಕಡೆಗೆ ಸೆಳೆಯುವ ಆಕರ್ಷಣ ಶಕ್ತಿ (Law of gravitation) ಇದೇ ಎಂದು ಹೇಳಬಹುದು.

[3] ದ್ಯುಲೋಕದ ಮತ್ತು ಪೃಥಿವಿಯ ನಡುವೆ ಇರುವ ವಾಯುವನ್ನೇ ಆಕಾಶವೆಂದು ಹೇಳಿದೆ

[4] ದ್ಯುಲೋಕ-ಪೃಥಿವಿಗಳಿಗೆ ಸಮಾನವಾಗಿರುವುದರಿಂದ.]

**ತೇಜೋ ಹ ವಾ ಉದಾನಸ್ತಸ್ಮಾದುಪಶಾಂತತೇಜಾಃ**
**ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ ॥ ೯ ॥**

ತೇಜಃ ಹ ವೈ = ತೇಜಸ್ಸೇ ಉದಾನಃ = ಉದಾನವು; ತಸ್ಮಾತ್ = ಆದುದರಿಂದ ಉಪಶಾಂತತೇಜಾಃ = ಕ್ಷೀಣವಾದ ತೇಜಸ್ಸುಳ್ಳವನು ಮನಸಿ = ಮನಸ್ಸಿನಲ್ಲಿ ಸಂಪದ್ಯಮಾನೈಃ = ಪ್ರವಿಷ್ಟವಾದ ಇಂದ್ರಿಯೈಃ = ಇಂದ್ರಿಯಗಳೊಂದಿಗೆ ಪುನರ್ಭವಂ = ಪುನರ್ಜನ್ಮವನ್ನು [ಪ್ರತಿಪದ್ಯತೇ = ಹೊಂದುತ್ತಾನೆ].

೯. ತೇಜಸ್ಸೇ[1] ಉದಾನವು; ಆದುದರಿಂದ ಕ್ಷೀಣವಾದ ತೇಜಸ್ಸುಳ್ಳವನು[2] ಮನಸ್ಸಿನಲ್ಲಿ ಪ್ರವಿಷ್ಟವಾದ[3] ಇಂದ್ರಿಯಗಳೊಂದಿಗೆ ಪುನರ್ಜನ್ಮವನ್ನು (ಹೊಂದುತ್ತಾನೆ).

[[1] ಸಾಮಾನ್ಯವಾಗಿ ಹೊರಗಿರುವ ತೇಜಸ್ಸು. ಇದು ತನ್ನ ಪ್ರಕಾಶನದಿಂದ ಉದಾನವಾಯುವನ್ನು ಅನುಗ್ರಹಿಸುತ್ತದೆ

[2] ತೇಜಸ್ಸು ಕ್ಷೀಣವಾದರೆ ಆಯುಸ್ಸು ಮುಗಿಯುತ್ತದೆ; ಸಾಯುವವನು (ಮುಮುರ್ಷು) ಎಂದರ್ಥ.

[3] ಉತ್ಕ್ರಾಂತಿಕಾಲದಲ್ಲಿ ವಾಗಾದಿ ಇಂದ್ರಿಯಗಳು ಮನಸ್ಸಿನಲ್ಲಿ ಸೇರಿಕೊಳ್ಳುತ್ತವೆ. ಛಾ. ಉ. ೬, ೮, ೬ ನೋಡಿ ]

**ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ; ಪ್ರಾಣಸ್ತೇಜಸಾ**
**ಯುಕ್ತಃ ಸಹಾತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ ॥ ೧೦ ॥**

ಏಷಃ = ಈ ಜೀವನು ಯಚ್ಚಿತ್ತಃ [ಭವತಿ]= ಯಾವ ಚಿತ್ತದಿಂದ ಕೂಡಿರುವನೊ ತೇನ = ಅದರಿಂದ ಪ್ರಾಣಂ = ಪ್ರಾಣನನ್ನು ಆಯಾತಿ = ಹೊಂದುತ್ತಾನೆ.

**ಪ್ರಾಣಃ** = ಪ್ರಾಣನು **ತೇಜಸಾ ಯುಕ್ತಃ** = ತೇಜಸ್ಸಿನಿಂದ ಕೂಡಿ **ಆತ್ಮನಾ ಸಹ** = ಆತ್ಮನೊಂದಿಗೆ **ಯಥಾಸಂಕಲ್ಪಿತಂ** = ಸಂಕಲ್ಪಕ್ಕೆ ಅನುಸಾರವಾದ **ಲೋಕಂ** = ಲೋಕಕ್ಕೆ **ನಯತಿ** = ಒಯ್ಯುತ್ತಾನೆ.

೧೦. ಈ ಜೀವನು ಯಾವ ಚಿತ್ತದಿಂದ[೧] ಕೂಡಿರುವನೊ ಅದರಿಂದ ಪ್ರಾಣನನ್ನು[೨] ಹೊಂದುತ್ತಾನೆ. ಪ್ರಾಣನು ತೇಜಸ್ಸಿನಿಂದ[೩] ಕೂಡಿ ಆತ್ಮನೊಂದಿಗೆ (ಅವನ) ಸಂಕಲ್ಪಕ್ಕೆ ಅನುಸಾರವಾದ[೪] ಲೋಕಕ್ಕೆ ಒಯ್ಯುತ್ತಾನೆ.

[[೧] ಮರಣಕಾಲದಲ್ಲಿ ಯಾವ ಚಿತ್ತವುಳ್ಳವನಾಗಿರುವನೊ ಆ ಸಂಕಲ್ಪದಿಂದ.
[೨] ಇಂದ್ರಿಯಗಳೊಂದಿಗೆ ಮುಖ್ಯಪ್ರಾಣವೃತ್ತಿಯನ್ನು ಹೊಂದುತ್ತಾನೆ.
[೩] ಉದಾನವೃತ್ತಿಯಿಂದ.
[೪] ಪುಣ್ಯಪಾಪಕರ್ಮಗಳಿಗೆ ಅನುಸಾರವಾದ.]

**ಯ ಏವಂ ವಿದ್ವಾನ್ ಪ್ರಾಣಂ ವೇದ । ನ ಹಾಸ್ಯ ಪ್ರಜಾ ಹೀಯತೇಽಮೃತೋ ಭವತಿ ತದೇಷ ಶ್ಲೋಕಃ　॥ ೧೧ ॥**

**ಯಃ ವಿದ್ವಾನ್** = ಯಾವ ವಿದ್ವಾಂಸನು **ಪ್ರಾಣಂ** = ಪ್ರಾಣನನ್ನು **ಏವಂ** = ಹೀಗೆ **ವೇದ** = ಅರಿಯುತ್ತಾನೆಯೊ **ಅಸ್ಯ** = ಅವನ **ಪ್ರಜಾಃ** = ಪುತ್ರಪೌತ್ರಾದಿಗಳು **ನ ಹೀಯತೇ**=ನಾಶವಾಗುವುದಿಲ್ಲ, **ಅಮೃತಃ ಭವತಿ**=ಅವನು ಅಮೃತನಾಗುವನು. **ತತ್** = ಈ ವಿಷಯದಲ್ಲಿ **ಏಷಃ ಶ್ಲೋಕಃ [ಭವತಿ]** = ಈ ಮಂತ್ರವಿರುತ್ತದೆ.

೧೧. ಯಾವ ವಿದ್ವಾಂಸನು ಪ್ರಾಣವನ್ನು ಹೀಗೆ ಅರಿಯುತ್ತಾನೆಯೊ ಅವನ ಪುತ್ರಪೌತ್ರಾದಿಗಳು ನಾಶವಾಗುವುದಿಲ್ಲ, ಅವನು ಅಮೃತನಾಗುವನು.[೧] ಈ ವಿಷಯದಲ್ಲಿ ಈ ಮಂತ್ರವಿರುತ್ತದೆ.

[[೧] ಇವನಿಗೆ ಇಹಲೋಕದ ಮತ್ತು ಪರಲೋಕದ ಫಲವುಂಟಾಗುತ್ತದೆ. ಶರೀರಪಾತವಾದ ಮೇಲೆ ಪ್ರಾಣನೊಂದಿಗೆ ಸಾಯುಜ್ಯವನ್ನು ಹೊಂದುತ್ತಾನೆ. ಇದು ಆಪೇಕ್ಷಿಕಮುಕ್ತಿ.]

**ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ ।
ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತಮಶ್ನುತೇ ॥
ವಿಜ್ಞಾಯಾಮೃತಮಶ್ನುತ ಇತಿ　॥ ೧೨ ॥**

**ಪ್ರಾಣಸ್ಯ** = ಪ್ರಾಣನ **ಉತ್ಪತ್ತಿಂ** = ಉತ್ಪತ್ತಿ, **ಆಯತಿಂ** = [ಶರೀರಕ್ಕೆ] ಆಗಮನ, **ಸ್ಥಾನಂ** = [ಪಾಯೂಪಸ್ಥಾದಿಗಳಲ್ಲಿ] ಸ್ಥಾನ, **ಪಂಚಧಾ ವಿಭುತ್ವಂ ಚ**

ಏವ = ಐದು ಬಗೆಯ ವಿಭುತ್ವ, ಅಧ್ಯಾತ್ಮಂ ಚ ಏವ = ಮತ್ತು ಅಧ್ಯಾತ್ಮ—[ಇವುಗಳನ್ನು] ವಿಜ್ಞಾಯ = ಅರಿತುಕೊಂಡು ಅಮೃತಂ = ಅಮೃತವನ್ನು ಅಶ್ನುತೇ = ಹೊಂದುತ್ತಾನೆ, ವಿಜ್ಞಾಯ ಅಮೃತಂ ಅಶ್ನುತೇ ಇತಿ.

೧೨. ಪ್ರಾಣನ ಉತ್ಪತ್ತಿ, (ಶರೀರಕ್ಕೆ ಅವನ) ಆಗಮನ,[೧] (ವಾಯೂವಸ್ಥಗಳಲ್ಲಿ ಅವನ ಸ್ಥಾನ, (ಅವನ) ಐದು ಬಗೆಯ ವಿಭುತ್ವ[೨] ಮತ್ತು ಅಧ್ಯಾತ್ಮ[೩]—ಇವುಗಳನ್ನು ಅರಿತುಕೊಂಡು ಅಮೃತವನ್ನು ಹೊಂದುತ್ತಾನೆ, ಅರಿತುಕೊಂಡು ಅಮೃತವನ್ನು ಹೊಂದುತ್ತಾನೆ.

[[೧] ಮನಸ್ಸಿನ ಕರ್ಮದಿಂದ.

[೨] ಪ್ರಾಣವೃತ್ತಿಗಳನ್ನು ಐದು ಬಗೆಯಾಗಿ ಸ್ಥಾಪಿಸುವುದು.

[೩] ಒಳಗೆ ಚಕ್ಷುರಾದಿಗಳ ಆಕಾರದಿಂದ ಇರುವುದು.]

# [redacted]ನೆಯ ಪ್ರಶ್ನೆ

**ಅಥ ಹೈನಂ ಸೌ[redacted]ಣೀ ಗಾರ್ಗ್ಯಃ ಪಪ್ರಚ್ಛ । ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪಂತಿ? ಕಾನ್ಯಸ್ಮಿಂಜಾಗ್ರತಿ? ಕತರ ಏಷ ದೇವಃ ಸ್ವಪ್ನಾನ್ ಪಶ್ಯತಿ? ಕಸ್ಯೈತತ್ ಸುಖಂ ಭವತಿ? ಕಸ್ಮಿನ್ನು ಸರ್ವೇ ಸಂಪ್ರತಿಷ್ಠಿತಾ ಭವಂತೀತಿ ॥ ೧ ॥**

**ಅಥ ಹ** = ಅನಂತರ **ಸೌರ್ಯಾಯಣೀ ಗಾರ್ಗ್ಯಃ** = ಸೌರ್ಯಾಯಣೀ ಗಾರ್ಗ್ಯನು **ಏನಂ** = ಇವನನ್ನು **ಪಪ್ರಚ್ಛ** = ಪ್ರಶ್ನಿಸಿದನು· **ಭಗವನ್** = ಭಗವಂತನೆ, **ಏತಸ್ಮಿನ್ ಪುರುಷೇ** = ಈ ಪುರುಷನಲ್ಲಿ **ಕಾನಿ** = ಯಾವುವು **ಸ್ವಪಂತಿ** = ನಿದ್ರಿಸುವುವು? **ಅಸ್ಮಿನ್** = ಇವನಲ್ಲಿ **ಕಾನಿ** = ಯಾವುವು **ಜಾಗ್ರತಿ** = ಎಚ್ಚತ್ತಿರುವುವು? **ಕತರಃ** = [ಇವೆರಡರಲ್ಲಿ] ಯಾವ **ಏಷಃ ದೇವಃ** = ಈ ದೇವನು **ಸ್ವಪ್ನಾನ್** = ಸ್ವಪ್ನಗಳನ್ನು **ಪಶ್ಯತಿ** = ನೋಡುವನು? **ಕಸ್ಯ** = ಯಾರಿಗೆ **ಏತತ್ ಸುಖಂ** = ಈ ಸುಖವು **ಭವತಿ** = ಉಂಟಾಗುವುದು? **ಕಸ್ಮಿನ್ ನು** = ಯಾರಲ್ಲಿ **ಸರ್ವೇ** = ಎಲ್ಲವೂ **ಸಂಪ್ರತಿಷ್ಠಿತಾಃ ಭವಂತಿ** = ಏಕೀಭೂತವಾಗುವುವು **ಇತಿ** = ಎಂದು.

೧. ಅನಂತರ ಸೌರ್ಯಾಯಣೀ ಗಾರ್ಗ್ಯನು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಈ ಪುರುಷನಲ್ಲಿ[೧] ಯಾವುವು[೨] ನಿದ್ರಿಸುವುವು? ಇವನಲ್ಲಿ ಯಾವುವು ಎಚ್ಚತ್ತಿರುವುವು? (ಇವೆರಡರಲ್ಲಿ)[೩] ಯಾವ ದೇವನು ಸ್ವಪ್ನಗಳನ್ನು ನೋಡುವನು? ಯಾರಿಗೆ ಈ ಸುಖವು ಉಂಟಾಗುವುದು?[೪] ಯಾರಲ್ಲಿ ಎಲ್ಲವೂ ಏಕೀಭೂತವಾಗುವುವು?[೫]

[ಹಿಂದಿನ ಮೂರು ಪ್ರಶ್ನೆಗಳಿಂದ ಸಾಧ್ಯಸಾಧನರೂಪವೂ ಅನಿತ್ಯವೂ ಆದ ಅಪರ ವಿದ್ಯೆಯ ವಿಷಯವನ್ನು ಹೇಳಿದ್ದಾಯಿತು; ಈಗ ಸಾಧ್ಯಸಾಧನರೂಪವಲ್ಲದುದೂ ಪ್ರಾಣಮನಸ್ಸುಗಳಿಲ್ಲದುದೂ ಅಗೋಚರವೂ ಅತೀಂದ್ರಿಯವಿಷಯವೂ ಶಿವವೂ ಪರವಿದ್ಯಾವಿಷಯವೂ ಆದ ಪುರುಷನೆಂಬ ಹೆಸರಿನ ಅಕ್ಷರಸತ್ಯವನ್ನು ಉಪದೇಶಿಸಲು ಮುಂದಿನ ಮೂರು ಪ್ರಶ್ನೆಗಳು ಆರಂಭಿಸಲ್ಪಟ್ಟಿವೆ.

[೧] ಅವಯವಗಳಿಂದ ಕೂಡಿದ ಈ ಶರೀರದಲ್ಲಿ.

[೨] ಯಾವ ಯಾವ ಕರಣಗಳು.

[೩] ಕಾರ್ಯರೂಪವಾದ ದೇಹದಲ್ಲಿ ಮತ್ತು ಕರಣರೂಪವಾದ ಇಂದ್ರಿಯಗಳಲ್ಲಿ.

[೪] ಜಾಗ್ರತ್-ಸ್ವಪ್ನವ್ಯಾಪಾರಗಳು ನಿಂತ ಮೇಲೆ ಪ್ರಸನ್ನವೂ ನಿರಾಯಾಸರೂಪವೂ ಬಾಧೆಯಿಲ್ಲದುದೂ ಆದ ಸುಖವು ಯಾರಿಗೆ ಉಂಟಾಗುವುದು?

ಜಾಗ್ರತ್‌ಸ್ವಪ್ನವ್ಯಾಪಾರಗಳು ನಿಂತಾಗ, ನದಿಗಳು ಸಮುದ್ರವನ್ನು ಪ್ರವೇಶಿಸಿ ಒಂದಾಗುವಂತೆ, ಎಲ್ಲವೂ ಯಾರಲ್ಲಿ ಒಂದಾಗುವುವು?]

**ತಸ್ಮೈ ಸ ಹೋವಾಚ । ಯಥಾ ಗಾರ್ಗ್ಯ, ಮರೀಚಯೋಽರ್ಕಸ್ಯಾಸ್ತಂ ಗಚ್ಛತಃ ಸರ್ವಾ ಏತಸ್ಮಿಂಸ್ತೇಜೋಮಂಡಲ ಏಕೀಭವಂತಿ । ತಾಃ ಪುನಃ ಪುನರುದಯತಃ ಪ್ರಚರಂತ್ಯೇವಂ ಹ ವೈ ತತ್ಸರ್ವಂ ಪರೇ ದೇವೇ ಮನಸ್ಯೇಕೀಭವತಿ । ತೇನ ತರ್ಹ್ಯೇಷ ಪುರುಷೋ ನ ಶೃಣೋತಿ ನ ಪಶ್ಯತಿ ನ ಜಿಘ್ರತಿ ನ ರಸಯತೇ ನ ಸ್ಪೃಶತೇ ನಾಭಿವದತೇ ನಾದತ್ತೇ ನಾನಂದಯತೇ ನ ವಿಸೃಜತೇ ನೇಯಾಯತೇ ಸ್ವಪಿತೀತ್ಯಾಚಕ್ಷತೇ ॥ ೨ ॥**

**ಸಃ** = ಪಿಪ್ಪಲಾದನು **ತಸ್ಮೈ** = ಅವನಿಗೆ **ಉವಾಚ ಹ**=ಹೇಳಿದನು: **ಗಾರ್ಗ್ಯ**= ಎಲೈ ಗಾರ್ಗ್ಯನೆ, **ಯಥಾ**=ಹೇಗೆ **ಅಸ್ತಂ ಗಚ್ಛತಃ** = ಅಸ್ತವಾಗುತ್ತಿರುವ **ಅರ್ಕಸ್ಯ**= ಸೂರ್ಯನ **ಸರ್ವಾಃ** = ಎಲ್ಲ **ಮರೀಚಯಃ** = ಕಿರಣಗಳು **ಏತಸ್ಮಿನ್ ತೇಜೋಮಂಡಲೇ** = ಈ ತೇಜೋಮಂಡಲದಲ್ಲಿ **ಏಕೀಭವಂತಿ** = ಒಂದಾಗುತ್ತವೆಯೊ, **ಪುನಃ** = ಪುನಃ **ಉದಯತಃ** = ಉದಯಿಸುತ್ತಿರುವ [**ಅರ್ಕಸ್ಯ** = ಸೂರ್ಯನ] **ತಾಃ** = ಆ [ಕಿರಣಗಳು] **ಪುನಃ** = ಪುನಃ **ಪ್ರಚರಂತಿ**= ಪ್ರಸರಿಸುತ್ತವೆಯೊ, **ಏವಂ ಹ** = ಹೀಗೆಯೇ **ತತ್ಸರ್ವಂ** = ವಿಷಯೇಂದ್ರಿಯ ಸಮೂಹವೆಲ್ಲವೂ **ಪರೇ ದೇವೇ**= ಪರಮದೇವನಾದ **ಮನಸಿ** = ಮನಸ್ಸಿನಲ್ಲಿ **ಏಕೀಭವತಿ** = ಒಂದಾಗುತ್ತದೆ **ತೇನ** = ಆದುದರಿಂದ **ತರ್ಹಿ** = ಆಗ **ಏಷಃ ಪುರುಷಃ** = ಈ ಪುರುಷನು **ನ ಶೃಣೋತಿ** = ಕೇಳುವುದಿಲ್ಲ, **ನ ಪಶ್ಯತಿ** = ನೋಡುವುದಿಲ್ಲ, **ನ ಜಿಘ್ರತಿ** = ಮೂಸುವುದಿಲ್ಲ, **ನ ರಸಯತೇ** = ರುಚಿನೋಡುವುದಿಲ್ಲ, **ನ ಸ್ಪೃಶತೇ** = ಸ್ಪರ್ಶಿಸುವುದಿಲ್ಲ, **ನ ಅಭಿವದತೇ** = ಮಾತನಾಡುವುದಿಲ್ಲ, **ನ ಆದತ್ತೇ** = ತೆಗೆದುಕೊಳ್ಳುವುದಿಲ್ಲ, **ನ ಆನಂದಯತೇ** = ಆನಂದಪಡುವುದಿಲ್ಲ, **ನ ವಿಸೃಜತೇ** = ಬಿಡುವುದಿಲ್ಲ **ನ ಇಯಾಯತೇ** = ಹೋಗುವುದಿಲ್ಲ; **ಸ್ವಪಿತಿ** = ನಿದ್ರಿಸುತ್ತಿದ್ದಾನೆ **ಇತಿ** = ಎಂದು **ಆಚಕ್ಷತೇ** = ಹೇಳುತ್ತಾರೆ

**೨.** ಪಿಪ್ಪಲಾದನು ಅವನಿಗೆ ಹೇಳಿದನು: ಎಲೈ ಗಾರ್ಗ್ಯನೆ, ಅಸ್ತವಾಗುತ್ತಿರುವ ಸೂರ್ಯನ ಕಿರಣಗಳೆಲ್ಲ ಈ ತೇಜೋಮಂಡಲದಲ್ಲಿ ಹೇಗೆ ಒಂದಾಗುತ್ತವೆಯೊ, ಪುನಃ ಉದಯಿಸುತ್ತಿರುವ (ಸೂರ್ಯನ) ಆ (ಕಿರಣಗಳು) ಪುನಃ ಹೇಗೆ ಪ್ರಸರಿಸುತ್ತವೆಯೊ, ಹಾಗೆಯೇ ಈ ವಿಷಯೇಂದ್ರಿಯ ಸಮೂಹವೆಲ್ಲವೂ ಪರಮದೇವನಾದ[^] ಮನಸ್ಸಿನಲ್ಲಿ ಒಂದಾಗುತ್ತದೆ. ಆದುದರಿಂದ ಆಗ ಈ ಪುರುಷನು ಕೇಳುವುದಿಲ್ಲ, ನೋಡುವುದಿಲ್ಲ, ಮೂಸುವುದಿಲ್ಲ,

ರುಚಿನೋಡುವುದಿಲ್ಲ, ಸ್ಪರ್ಶಿಸುವುದಿಲ್ಲ, ಮಾತನಾಡುವುದಿಲ್ಲ, ತೆಗೆದುಕೊಳ್ಳು ವುದಿಲ್ಲ, ಆನಂದಪಡುವುದಿಲ್ಲ, ಬಿಡುವುದಿಲ್ಲ, ಹೋಗುವುದಿಲ್ಲ; 'ನಿದ್ರಿಸುತ್ತಿದ್ದಾನೆ' ಎಂದು ಜನರು ಹೇಳುತ್ತಾರೆ.

[೧ ಪ್ರಕಾಶಮಾನವಾದ.]

**ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ । ಗಾರ್ಹಪತ್ಯೋ ಹ ವಾ ಏಷೋಽಪಾನೋ ವ್ಯಾನೋಽನ್ವಾಹಾರ್ಯಪಚನೋ ಯದ್ಗಾರ್ಹಪತ್ಯಾತ್ ಪ್ರಣೀಯತೇ ಪ್ರಣಯನಾದಾಹವನೀಯಃ ಪ್ರಾಣಃ ॥ ೩ ॥**

ಏತಸ್ಮಿನ್ ಪುರೇ = ಈ ಪುರದಲ್ಲಿ ಪ್ರಾಣಾಗ್ನಯಃ ಏವ = ಪ್ರಾಣಾಗ್ನಿಗಳೇ ಜಾಗ್ರತಿ = ಎಚ್ಚತ್ತಿರುವುವು ಏಷಃ ಅಪಾನಃ ಹ ವೈ = ಈ ಅಪಾನವೇ ಗಾರ್ಹಪತ್ಯಃ = ಗಾರ್ಹಪತ್ಯ; ವ್ಯಾನಃ = ವ್ಯಾನವು ಅನ್ವಾಹಾರ್ಯಪಚನಃ = ದಕ್ಷಿಣಾಗ್ನಿ; ಪ್ರಣಯನಾತ್ = ಪ್ರಣಯನವಾದ ಗಾರ್ಹಪತ್ಯಾತ್ = ಗಾರ್ಹಪತ್ಯದಿಂದ ಪ್ರಣೀಯತೇ = ತೆಗೆದುಕೊಳ್ಳಲ್ಪಟ್ಟಿದೆ [ಆದುದರಿಂದ] ಪ್ರಾಣಃ = ಪ್ರಾಣವು ಆಹವನೀಯಃ = ಆಹವನೀಯವು

೩. ಈ ಪುರದಲ್ಲಿ[೧] ಪ್ರಾಣಾಗ್ನಿಗಳೇ ಎಚ್ಚತ್ತಿರುವುವು. ಈ ಅಪಾನವೇ ಗಾರ್ಹಪತ್ಯಾಗ್ನಿ; ವ್ಯಾನವು[೨] ದಕ್ಷಿಣಾಗ್ನಿ ಪ್ರಣಯನವಾದ[೩] ಗಾರ್ಹಪತ್ಯದಿಂದ ತೆಗೆದುಕೊಳ್ಳಲ್ಪಟ್ಟಿದೆಯಾದುದರಿಂದ ಪ್ರಾಣವು ಆಹವನೀಯಾಗ್ನಿ.

[ನಿದ್ರಾಕಾಲದಲ್ಲಿ ಎಲ್ಲ ಇಂದ್ರಿಯಗಳು ಸುಪ್ತವಾಗಿರುವಾಗ ಪ್ರಾಣಗಳು ಮಾತ್ರ ಎಚ್ಚತ್ತಿರುವುವು

೧ ನವದ್ವಾರಗಳಿರುವ ದೇಹವೆಂಬ ಪುರ

೨ ಹೃದಯದ ದಕ್ಷಿಣ (ಬಲಗಡೆಯ) ರಂಧ್ರದ ಮೂಲಕ ವ್ಯಾನವು ಹೊರಟು ಬರುವುದರಿಂದ ಅದನ್ನು ದಕ್ಷಿಣಾಗ್ನಿಗೆ ಹೋಲಿಸಿದೆ.

೩ ಅಗ್ನಿಹೋತ್ರಕಾಲದಲ್ಲಿ ಗಾರ್ಹಪತ್ಯಾಗ್ನಿಯಿಂದ ಆಹವನೀಯವೆಂಬ ಅಗ್ನಿಯನ್ನು ತೆಗೆದುಕೊಳ್ಳುವುದರಿಂದ (ಎಂದರೆ ಹಚ್ಚುವುದರಿಂದ) ಗಾರ್ಹಪತ್ಯಕ್ಕೆ ಪ್ರಣಯನವೆಂಬ ಹೆಸರುಂಟು. ನಿದ್ರಿಸುತ್ತಿರುವವನ ಅಪಾನವೃತ್ತಿಯಿಂದ ತೆಗೆದುಕೊಂಡಂತೆ ಪ್ರಾಣವು ಮುಖನಾಸಿಕಗಳ ಮೂಲಕ ಸಂಚರಿಸುತ್ತದೆ. ಆದುದರಿಂದ ಪ್ರಾಣವು ಆಹವನೀಯ.]

**ಯದುಚ್ಛ್ವಾಸನಿಃಶ್ವಾಸಾವೇತಾವಾಹುತೀ ಸಮಂ ನಯತೀತಿ ಸ ಸಮಾನಃ । ಮನೋ ಹ ವಾವ ಯಜಮಾನ, ಇಷ್ಟಫಲ-**

**ಮೇವೋದಾನಃ; ಸ ಏನಂ ಯಜಮಾನಮಹರಹರ್ಬ್ರಹ್ಮ ಗಮ-ಯತಿ ॥ ೪ ॥**

ಯತ್ = ಯಾವ ಕಾರಣದಿಂದ ಏತೌ = ಈ ಉಚ್ಛ್ವಾಸನಿಃಶ್ವಾಸೌ = ಉಚ್ಛ್ವಾಸನಿಃಶ್ವಾಸಗಳೆಂಬ **ಆಹುತೀ**=ಆಹುತಿಗಳನ್ನು **ಸಮಂ**=ಸಮವಾಗಿ **ನಯತಿ ಇತಿ**= ಸಮಾನವಾಗಿ ಒಯ್ಯುವುದೊ [ತಸ್ಮಾತ್ = ಆ ಕಾರಣದಿಂದ] **ಸಃ ಸಮಾನಃ**= ಆ ಸಮಾನವು [ಹೋತಾ = ಹೋತೃ]; **ಮನಃ ಹ** = ಮನಸ್ಸೇ **ಯಜಮಾನಃ** = ಯಜಮಾನನು; **ಇಷ್ಟಫಲಂ ಏವ** = ಯಾಗಫಲವೇ **ಉದಾನಃ** = ಉದಾನವು; **ಸಃ** = ಅದು [ಉದಾನ] **ಏನಂ** = ಈ **ಯಜಮಾನಂ** = ಯಜಮಾನನನ್ನು **ಅಹಃ ಅಹಃ** = ಪ್ರತಿದಿನವೂ **ಬ್ರಹ್ಮ** = ಬ್ರಹ್ಮವನ್ನು ಕುರಿತು **ಗಮಯತಿ** = ಕರೆದು ಕೊಂಡು ಹೋಗುತ್ತದೆ.

೪. ಉಚ್ಛ್ವಾಸನಿಃಶ್ವಾಸಗಳೆಂಬ ಈ ಆಹುತಿಗಳನ್ನು ಸಮಾನವಾಗಿ ಒಯ್ಯುವುದರಿಂದ ಆ ಸಮಾನವು (ಅಗ್ನಿಹೋತೃವು); ಮನಸ್ಸೇ ಯಜಮಾನನು;[೧] ಯಾಗಫಲವೇ ಉದಾನವು;[೨] ಆ ಉದಾನವು ಈ ಯಜಮಾನನನ್ನು ಪ್ರತಿದಿನವೂ ಬ್ರಹ್ಮದ ಬಳಿಗೆ ಕರೆದುಕೊಂಡು ಹೋಗುತ್ತದೆ.

[[೧] ಮನಸ್ಸು ಕಾರ್ಯಕರಣಗಳ ವಿಷಯದಲ್ಲಿ ಪ್ರಾಧಾನ್ಯವಾಗಿ ವ್ಯವಹರಿಸುತ್ತಿರುವುದರಿಂದಲೂ, ಅಗ್ನಿಹೋತ್ರಿಯು ಸ್ವರ್ಗಕ್ಕೆ ಹೋಗುವಂತೆ ಬ್ರಹ್ಮದ ಬಳಿಗೆ ಹೊರಟಿರುವುದರಿಂದಲೂ ಯಜಮಾನನೆಂದು ಹೇಳಲ್ಪಟ್ಟಿದೆ.

[೨] ಉದಾನವಾಯುವು ಮನಸ್ಸೆಂಬ ಯಜಮಾನನನ್ನು ಸ್ವಪ್ನಗಳಿಂದ ತಪ್ಪಿಸಿ ಪ್ರತಿದಿನವೂ ಬ್ರಹ್ಮದ ಬಳಿಗೆ ಒಯ್ಯುತ್ತಿರುವುದರಿಂದ ಉದಾನವು ಯಾಗಫಲವೆಂದು ಹೇಳಿದೆ.]

**ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ । ಯ-ದ್ದೃಷ್ಟಂ ದೃಷ್ಟಮನುಪಶ್ಯತಿ, ಶ್ರುತಂ ಶ್ರುತಮೇವಾರ್ಥಮನು-ಶೃಣೋತಿ, ದೇಶದಿಗಂತರೈಶ್ಚ ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನು-ಭವತಿ; ದೃಷ್ಟಂ ಚಾದೃಷ್ಟಂ ಚ, ಶ್ರುತಂ ಚಾಶ್ರುತಂ ಚಾನು-ಭೂತಂ ಚಾನನುಭೂತಂ ಚ, ಸಚ್ಚಾಸಚ್ಚ, ಸರ್ವಂ ಪಶ್ಯತಿ ಸರ್ವಃ ಪಶ್ಯತಿ ॥ ೫ ॥**

**ಅತ್ರ ಸ್ವಪ್ನೇ** = ಈ ಸ್ವಪ್ನದಲ್ಲಿ **ಏಷಃ ದೇವಃ** = ಈ ದೇವನು **ಮಹಿಮಾನಂ** = ಮಹಿಮೆಯನ್ನು **ಅನುಭವತಿ** = ಅನುಭವಿಸುತ್ತಾನೆ; **ಯತ್ ದೃಷ್ಟಂ ದೃಷ್ಟಂ** = ಯಾವುದು ನೋಡಲ್ಪಟ್ಟಿದೆಯೊ [ಅದನ್ನೇ] **ಅನುಪಶ್ಯತಿ** = ನೋಡುತ್ತಾನೆ, **ಶ್ರುತಂ**

**ಶ್ರುತಂ ಏವ ಅರ್ಥಂ** = ಕೇಳಲ್ಪಟ್ಟ ವಿಷಯವನ್ನೇ **ಅನುಶೃಣೋತಿ** = ಕೇಳುತ್ತಾನೆ, **ದೇಶದಿಗಂತರೈಃ ಚ** = ಬೇರೆ ಬೇರೆ ದೇಶಗಳಲ್ಲಿಯೂ ದಿಕ್ಕುಗಳಲ್ಲಿಯೂ **ಪ್ರತ್ಯನು-ಭೂತಂ** = ಅನುಭವಿಸಿದ್ದನ್ನು **ಪುನಃ ಪುನಃ** = ಪುನಃ ಪುನಃ **ಪ್ರತ್ಯನುಭವತಿ** = ಅನುಭವಿಸುತ್ತಾನೆ; **ದೃಷ್ಟಂ ಚ ಅದೃಷ್ಟಂ ಚ** = ನೋಡಿದ್ದು, ನೋಡದೆ ಇರುವುದು **ಶ್ರುತಂ ಚ ಅಶ್ರುತಂ ಚ** = ಕೇಳಿದ್ದು ಕೇಳದೆ ಇರುವುದು, **ಅನುಭೂತಂ ಚ ಅನನುಭೂತಂ ಚ** = ಅನುಭವಿಸಿದ್ದು ಅನುಭವಿಸದೆ ಇರುವುದು **ಸತ್ ಚ ಅಸತ್ ಚ** = ಇರುವುದು ಇಲ್ಲದಿರುವುದು— **ಸರ್ವಂ** = ಎಲ್ಲವನ್ನೂ **ಪಶ್ಯತಿ** = ನೋಡುತ್ತಾನೆ; **ಸರ್ವಃ [ಸನ್]** = ಸರ್ವವೂ ಆಗಿ **ಪಶ್ಯತಿ** = ನೋಡುತ್ತಾನೆ.

**೫.** ಸ್ವಪ್ನದಲ್ಲಿ ಈ ದೇವನು[೧] ಮಹಿಮೆಯನ್ನು[೨] ಅನುಭವಿಸುತ್ತಾನೆ; ಯಾವುದು ನೋಡಲ್ಪಟ್ಟಿದೆಯೊ ಅದನ್ನೇ ನೋಡುತ್ತಾನೆ, ಯಾವ ವಿಷಯವು ಕೇಳಲ್ಪಟ್ಟಿದೆಯೊ ಅದನ್ನೇ ಕೇಳುತ್ತಾನೆ, ಬೇರೆ ಬೇರೆ ದೇಶಗಳಲ್ಲಿಯೂ ದಿಕ್ಕುಗಳಲ್ಲಿಯೂ ಯಾವುದು ಅನುಭವಿಸಲ್ಪಟ್ಟಿದೆಯೊ ಅದನ್ನೇ ಪುನಃ ಪುನಃ ಅನುಭವಿಸುತ್ತಾನೆ; ನೋಡಿದ್ದು[೩] ನೋಡದಿರುವುದು,[೪] ಕೇಳಿದ್ದು ಕೇಳದಿರುವುದು, ಅನುಭವಿಸಿದ್ದು[೫] ಅನುಭವಿಸದಿರುವುದು,[೬] ಇರುವುದು[೭] ಇಲ್ಲದಿರುವುದು[೮]— ಇವೆಲ್ಲವನ್ನೂ ನೋಡುತ್ತಾನೆ; ಸರ್ವವೂ[೯] ಆಗಿ ನೋಡುತ್ತಾನೆ.

[ಹಿಂದೆ ಎಂದರೆ ಜಾಗ್ರದವಸ್ಥೆಯಲ್ಲಿ ಉಂಟಾದ ಅನುಭವವೆಂಬ ವಾಸನೆಯಿಂದ ಪುನಃ ಪುನಃ ಆ ವಾಸನಾರೂಪವಾದ ವಿಷಯಗಳನ್ನೇ ಜೀವಾತ್ಮನು ಕನಸಿನಲ್ಲಿ ಅನುಭವಿಸುತ್ತಾನೆ. ಸುಷುಪ್ತಿಯನ್ನು ಪಡೆಯುವ ಮುನ್ನ ಕನಸು ಸಾಧ್ಯ.

೧ ಎಲ್ಲ ಕರಣಗಳ ಸ್ವರೂಪವಾದ ಮನಸ್ಸೆಂಬ ದೇವನು.

೨ ವಿಷಯವಿಷಯಿರೂಪವಾದ ವಿಭೂತಿಯನ್ನು.

೩ ಈ ಜನ್ಮದಲ್ಲಿ.

೪ ಹಿಂದಿನ ಜನ್ಮದಲ್ಲಿ ನೋಡಿದ್ದು.

೫ ಈ ಜನ್ಮದಲ್ಲಿ ಕೇವಲ ಮನಸ್ಸಿನಿಂದಲೇ.

೬ ಮನಸ್ಸಿನಿಂದಲೇ ಬೇರೆ ಜನ್ಮದಲ್ಲಿ ಅನುಭವಿಸಿರುವುದು.

೭ ನಿಜವಾದ ಭೌತಿಕವಸ್ತುಗಳು.

೮ ಬಿಸಿಲ್ಗುದುರೆ ಮೊದಲಾದುವು.

೯ ಸರ್ವಮನೋವಾಸನೆಗಳೆಂಬ ಉಪಾಧಿಯುಳ್ಳವನಾಗಿ.]

**ಸ ಯದಾ ತೇಜಸಾಭಿಭೂತೋ ಭವತಿ, ಅತ್ರೈಷ ದೇವಃ ಸ್ವಪ್ನಾನ್ನ ಪಶ್ಯತ್ಯಥ ತದೈತಸ್ಮಿಞ್ಶರೀರ ಏತತ್ ಸುಖಂ ಭವತಿ ॥ ೬ ॥**

ಸಃ = ಅವನು **ಯದಾ** = ಯಾವಾಗ **ತೇಜಸಾ** = ತೇಜಸ್ಸಿನಿಂದ **ಅಭಿಭೂತಃ ಭವತಿ** = ಅಭಿಭೂತನಾಗುವನೊ [ಆಗ] **ಅತ್ರ** = ಇಲ್ಲಿ, ಸುಷುಪ್ತಿಕಾಲದಲ್ಲಿ **ಏಷಃ ದೇವಃ** = ಈ ದೇವನು **ಸ್ವಪ್ನಾನ್** - ಸ್ವಪ್ನಗಳನ್ನು **ನ ಪಶ್ಯತಿ** = ನೋಡುವುದಿಲ್ಲ; **ಅಥ ತದಾ** = ಆಗ **ಏತಸ್ಮಿನ್** = ಈ **ಶರೀರೇ** = ಶರೀರದಲ್ಲಿ **ಏತತ್ ಸುಖಂ** = ಈ ಸುಖವು **ಭವತಿ** = ಉಂಟಾಗುತ್ತದೆ

೬. ಅವನು[೧] ಯಾವಾಗ ತೇಜಸ್ಸಿನಿಂದ[೨] ಅಭಿಭೂತನಾಗುವನೊ[೩] (ಆಗ) ಈ ಸುಷುಪ್ತಿಕಾಲದಲ್ಲಿ[೪] ಈ ದೇವನು ಕನಸುಗಳನ್ನು ನೋಡುವುದಿಲ್ಲ;[೫] ಆಗ ಈ ಶರೀರದಲ್ಲಿ ಈ ಸುಖವುಂಟಾಗುತ್ತದೆ.

[ಸುಷುಪ್ತಿಯಲ್ಲಾಗುವ ಸುಖವನ್ನು ಈ ಮಂತ್ರವು ವಿವರಿಸುತ್ತದೆ.

೧ ಮನೋರೂಪನಾದ ದೇವನು

೨ ನಾಡಿಗಳಲ್ಲಿರುವ ಸೂರ್ಯಸಂಬಂಧವಾದ ಪಿತ್ತವೆಂಬ ತೇಜಸ್ಸಿನಿಂದ, ಅಥವಾ ಆನಂದಗಿರಿಯು ಹೇಳುವಂತೆ ಚಿದ್ರೂಪವಾದ ಬ್ರಹ್ಮದಿಂದ

೩ ವಾಸನಾದ್ವಾರಗಳಿಂದ ತಿರಸ್ಕರಿಸಲ್ಪಟ್ಟಾಗ ಮನಸ್ಸಿನ ವೃತ್ತಿಗಳು ಇಂದ್ರಿಯಗಳೊಂದಿಗೆ ಹೃದಯದಲ್ಲಿ ನಿಲ್ಲುತ್ತವೆ

೪ ಯಾವಾಗ ಮನಸ್ಸು ಅವಿಶೇಷವಾದ ವಿಜ್ಞಾನರೂಪದಿಂದ ಶರೀರವನ್ನೆಲ್ಲ ವ್ಯಾಪಿಸುವುದೊ ಆಗ ಜೀವನು ಸುಷುಪ್ತಿಯನ್ನು ಹೊಂದುತ್ತಾನೆ.

೫ ಏಕೆಂದರೆ ದರ್ಶನದ್ವಾರವು ತೇಜಸ್ಸಿನಿಂದ ನಿರುದ್ಧವಾಗಿರುತ್ತದೆ ]

**ಸ ಯಥಾ ಸೋಮ್ಯ ವಯಾಂಸಿ ವಾಸೋವೃಕ್ಷಂ ಸಂಪ್ರತಿಷ್ಠಂತೇ ಏವಂ ಹ ವೈ ತತ್ಸರ್ವಂ ಪರ ಆತ್ಮನಿ ಸಂಪ್ರತಿಷ್ಠತೇ ॥ ೭ ॥**

ಸಃ [ದೃಷ್ಟಾಂತಃ] = ಈ ವಿಷಯದಲ್ಲಿ ಒಂದು ದೃಷ್ಟಾಂತವುಂಟು **ಸೋಮ್ಯ** = ಎಲೈ ಸೋಮ್ಯನೆ, **ಯಥಾ** = ಹೇಗೆ **ವಯಾಂಸಿ** = ಪಕ್ಷಿಗಳು **ವಾಸೋವೃಕ್ಷಂ [ಪ್ರತಿ]** = ತಾವು ವಾಸಿಸುವ ವೃಕ್ಷದ ಕಡೆಗೆ **ಸಂಪ್ರತಿಷ್ಠಂತೇ** = ಹೋಗಿ ಸೇರಿಕೊಳ್ಳುವುವೊ **ಏವಂ ಹ ವೈ** = ಹಾಗೆಯೇ **ತತ್ ಸರ್ವಂ** = ಅದೆಲ್ಲವೂ **ಪರೇ ಆತ್ಮನಿ** = ಪರಮಾತ್ಮನಲ್ಲಿ **ಸಂಪ್ರತಿಷ್ಠತೇ** = ನೆಲಸಿರುವುದು

೭. ಈ ವಿಷಯದಲ್ಲಿ ಒಂದು ದೃಷ್ಟಾಂತವುಂಟು. ಎಲೈ ಸೋಮ್ಯ, ಪಕ್ಷಿಗಳು ತಾವು ವಾಸಮಾಡುವ ವೃಕ್ಷದ ಕಡೆಗೆ ಹೋಗಿ ಹೇಗೆ ಸೇರಿಕೊಳ್ಳುವುವೊ ಹಾಗೆಯೇ ಅದೆಲ್ಲವೂ ಪರಮಾತ್ಮನಲ್ಲಿ ನೆಲಸಿರುವುದು

[ ಸುಷುಪ್ತಿಕಾಲದಲ್ಲಿ ಅವಿದ್ಯಾ-ಕಾಮ-ಕರ್ಮಗಳಿಂದ ಉಂಟಾಗಿರುವ ಶರೀರೇಂದ್ರಿಯಗಳು ಶಾಂತವಾಗುವುವು; ಇವು ಶಾಂತವಾದರೆ ಉಪಾಧಿಗಳಿಂದ ಬೇರೆ ವಿಧವಾಗಿ

ತಿಳಿದು ಬರುತ್ತಿರುವ ಆತ್ಮಸ್ವರೂಪವು ಅದ್ವಯವೂ ಏಕವೂ ಶಿವವೂ ಶಾಂತವೂ ಆಗುವುದು. ಈ ಅವಸ್ಥೆಯನ್ನು [illegible] ದೃಷ್ಟಾಂತಗಳ ಮೂಲಕ ವಿವರಿಸಿದೆ.]

**ಪೃಥಿವೀ ಚ ಪೃಥಿವೀಮಾತ್ರಾ ಚಾಪಶ್ಚಾಪೋಮಾತ್ರಾ ಚ, ತೇಜಶ್ಚ ತೇಜೋಮಾತ್ರಾ ಚ, ವಾಯುಶ್ಚ ವಾಯುಮಾತ್ರಾ ಚಾಕಾಶಶ್ಚಾಕಾಶಮಾತ್ರಾ ಚ, ಚಕ್ಷುಶ್ಚ ದ್ರಷ್ಟವ್ಯಂ ಚ, ಶ್ರೋತ್ರಂ ಚ ಶ್ರೋತವ್ಯಂ ಚ, ಘ್ರಾಣಂ ಚ ಘ್ರಾತವ್ಯಂ ಚ, ರಸಶ್ಚ ರಸಯಿತವ್ಯಂ ಚ, ತ್ವಕ್ ಚ ಸ್ಪರ್ಶಯಿತವ್ಯಂ ಚ, ವಾಕ್ ಚ ವಕ್ತವ್ಯಂ ಚ, ಹಸ್ತೌ ಚಾದಾತವ್ಯಂ ಚೋಪಸ್ಥಶ್ಚಾನಂದಯಿತವ್ಯಂ ಚ, ಪಾಯುಶ್ಚ ವಿಸರ್ಜಯಿತವ್ಯಂ ಚ, ಪಾದೌ ಚ ಗಂತವ್ಯಂ ಚ, ಮನಶ್ಚ ಮಂತವ್ಯಂ ಚ, ಬುದ್ಧಿಶ್ಚ ಬೋದ್ಧವ್ಯಂ ಚಾಹಂಕಾರಶ್ಚಾಹಂಕರ್ತವ್ಯಂ ಚ, ಚಿತ್ತಂ ಚ ಚೇತಯಿತವ್ಯಂ ಚ, ತೇಜಶ್ಚ ವಿದ್ಯೋತಯಿತವ್ಯಂ ಚ, ಪ್ರಾಣಶ್ಚ ವಿಧಾರಯಿತವ್ಯಂ ಚ ॥ ೮ ॥**

ಪೃಥಿವೀ ಚ ಪೃಥಿವೀಮಾತ್ರಾ ಚ = ಪೃಥಿವಿ ಮತ್ತು ಗಂಧತನ್ಮಾತ್ರೆ, **ಆಪಃ ಚ ಆಪೋಮಾತ್ರಾ ಚ** = ನೀರು ಮತ್ತು ರಸತನ್ಮಾತ್ರೆ, **ತೇಜಃ ಚ ತೇಜೋಮಾತ್ರಾ ಚ** = ತೇಜಸ್ಸು ಮತ್ತು ರೂಪತನ್ಮಾತ್ರೆ, **ವಾಯುಃ ಚ ವಾಯುಮಾತ್ರಾ ಚ** = ವಾಯು ಮತ್ತು ಸ್ಪರ್ಶತನ್ಮಾತ್ರೆ, **ಆಕಾಶಃ ಚ ಆಕಾಶಮಾತ್ರಾ ಚ** = ಆಕಾಶ ಮತ್ತು ಶಬ್ದತನ್ಮಾತ್ರೆ; **ಚಕ್ಷುಃ ಚ ದ್ರಷ್ಟವ್ಯಂ ಚ** = ಕಣ್ಣು ಮತ್ತು ಅದರಿಂದ ನೋಡಲ್ಪಡತಕ್ಕ ರೂಪ, **ಶ್ರೋತ್ರಂ ಚ ಶ್ರೋತವ್ಯಂ ಚ** = ಕಿವಿ ಮತ್ತು ಕೇಳಲ್ಪಡತಕ್ಕ ಶಬ್ದ, **ಘ್ರಾಣಂ ಚ ಘ್ರಾತವ್ಯಂ ಚ** = ಮೂಗು ಮತ್ತು ಮೂಸಲ್ಪಡತಕ್ಕ ಗಂಧ, **ರಸಃ ಚ ರಸಯಿತವ್ಯಂ ಚ** = ನಾಲಗೆ ಮತ್ತು ರಸ, **ತ್ವಕ್ ಚ ಸ್ಪರ್ಶಯಿತವ್ಯಂ ಚ** = ಸ್ಪರ್ಶೇಂದ್ರಿಯ ಮತ್ತು ಅದರ ವಿಷಯ, **ವಾಕ್ ಚ ವಕ್ತವ್ಯಂ ಚ** = ವಾಗಿಂದ್ರಿಯ ಮತ್ತು ವಾಕ್ಯ, **ಹಸ್ತೌ ಚ ಆದಾತವ್ಯಂ ಚ** = ಹಸ್ತಗಳು ಮತ್ತು ಹಿಡಿಯಲ್ಪಡತಕ್ಕ ವಸ್ತು, **ಉಪಸ್ಥಃ ಚ ಆನಂದಯಿತವ್ಯಂ ಚ** = ಉಪಸ್ಥ ಮತ್ತು ಅದರ ವಿಷಯ, **ಪಾಯುಃ ಚ ವಿಸರ್ಜಯಿತವ್ಯಂ ಚ** = ಪಾಯು ಮತ್ತು ಅದರ ವಿಷಯ, **ಪಾದೌ ಚ ಗಂತವ್ಯಂ ಚ** = ಪಾದಗಳು ಮತ್ತು ಹೋಗುವ ಸ್ಥಾನ, **ಮನಃ ಚ ಮಂತವ್ಯಂ ಚ** = ಮನಸ್ಸು ಮತ್ತು ಮನನೀಯವಿಷಯ, **ಬುದ್ಧಿಃ ಚ ಬೋದ್ಧವ್ಯಂ ಚ** = ಬುದ್ಧಿ ಮತ್ತು ತಿಳಿಯಲ್ಪಡತಕ್ಕ ವಿಷಯ, **ಅಹಂಕಾರಃ ಚ ಅಹಂಕರ್ತವ್ಯಂ ಚ** = ಅಹಂಕಾರ ಮತ್ತು ಅದರ ವಿಷಯ, **ಚಿತ್ತಂ ಚ ಚೇತಯಿತವ್ಯಂ ಚ** = ಚಿತ್ತ ಮತ್ತು ಅರಿಯಲ್ಪಡತಕ್ಕ ವಿಷಯ, **ತೇಜಃ ಚ ವಿದ್ಯೋತಯಿತವ್ಯಂ ಚ** = ತೇಜಸ್ಸು ಮತ್ತು ಪ್ರಕಾಶಿಸಲ್ಪಡತಕ್ಕ ವಿಷಯ, **ಪ್ರಾಣಃ ಚ ವಿಧಾರಯಿತವ್ಯಂ ಚ** = ಸೂತ್ರಾತ್ಮ

ಮತ್ತು ಅವನಲ್ಲಿ ಧರಿಸಲ್ಪಟ್ಟಿರುವ ಎಲ್ಲ ಜಗತ್ತು [ಇವೆಲ್ಲವೂ ಆತ್ಮನಲ್ಲಿ ಸೇರಿ ಕೊಂಡಿರುವುವು].

೮. ಪೃಥ್ವಿ ಮತ್ತು ಗಂಧತನ್ಮಾತ್ರೆ, ನೀರು ಮತ್ತು ರಸತನ್ಮಾತ್ರೆ, ತೇಜಸ್ಸು ಮತ್ತು ರೂಪತನ್ಮಾತ್ರೆ, ವಾಯು ಮತ್ತು ಸ್ಪರ್ಶತನ್ಮಾತ್ರೆ, ಆಕಾಶ ಮತ್ತು ಶಬ್ದತನ್ಮಾತ್ರೆ,೧ ಕಣ್ಣು ಮತ್ತು ಅದರಿಂದ ನೋಡಲ್ಪಡತಕ್ಕ ರೂಪ, ಕಿವಿ ಮತ್ತು ಕೇಳಲ್ಪಡತಕ್ಕ ಶಬ್ದ, ಮೂಗು ಮತ್ತು ಮೂಸಲ್ಪಡತಕ್ಕ ಗಂಧ, ನಾಲಗೆ ಮತ್ತು ರಸ, ಸ್ಪರ್ಶೇಂದ್ರಿಯ ಮತ್ತು ಅದರ ವಿಷಯ, ವಾಗಿಂದ್ರಿಯ ಮತ್ತು ವಾಕ್ಯ, ಹಸ್ತಗಳು ಮತ್ತು ಹಿಡಿಯಲ್ಪಡತಕ್ಕ ವಸ್ತು, ಉಪಸ್ಥ ಮತ್ತು ಅದರ ವಿಷಯ, ಪಾಯು ಮತ್ತು ಅದರ ವಿಷಯ, ಪಾದಗಳು ಮತ್ತು ಹೋಗುವ ಸ್ಥಾನ, ಮನಸ್ಸು ಮತ್ತು ಮನನೀಯ ವಿಷಯ, ಬುದ್ಧಿ ಮತ್ತು ತಿಳಿಯಲ್ಪಡತಕ್ಕ ವಿಷಯ, ಅಹಕಾರ ಮತ್ತು ಅದರ ವಿಷಯ, ಚಿತ್ತ ಮತ್ತು ಅರಿಯಲ್ಪಡತಕ್ಕ ವಿಷಯ, ತೇಜಸ್ಸು ಮತ್ತು ಪ್ರಕಾಶಿಸಲ್ಪಡತಕ್ಕ ವಿಷಯ, ಸೂತ್ರಾತ್ಮ ಮತ್ತು ಅವನಲ್ಲಿ ಧರಿಸಲ್ಪಟ್ಟಿರುವ ಎಲ್ಲ ಜಗತ್ತು—(ಇವೆಲ್ಲವೂ ಆತ್ಮನಲ್ಲಿ ನೆಲಸಿರುವುವು.)

[ಹಿಂದಿನ ಮಂತ್ರದಲ್ಲಿ 'ಅದೆಲ್ಲವೂ ಪರಮಾತ್ಮನಲ್ಲಿ ನೆಲಸಿರುವುದು' ಎಂದು ಹೇಳಿದ್ದಾಯಿತು. ಈಗ ಇಲ್ಲಿ 'ಅದೆಲ್ಲವೂ' ಎಂಬುದರ ವಿವರವನ್ನು ಕೊಟ್ಟಿದೆ.
೧ ಇಲ್ಲಿಯ ವರೆಗೆ ಸ್ಥೂಲಸೂಕ್ಷ್ಮಭೂತಗಳು ಎಂದರ್ಥ.]

**ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ । ಸ ಪರೇಽಕ್ಷರ ಆತ್ಮನಿ ಸಂಪ್ರತಿಷ್ಠತೇ ॥ ೯ ॥**

ಏಷಃ ಹಿ = ಇವನೇ ದ್ರಷ್ಟಾ = ನೋಡುವವನು, ಸ್ಪ್ರಷ್ಟಾ = ಮುಟ್ಟುವವನು, **ಶ್ರೋತಾ** = ಕೇಳುವವನು, **ಘ್ರಾತಾ** = ಮೂಸುವವನು, ರಸಯಿತಾ = ಆಸ್ವಾದಿಸುವವನು, ಮಂತಾ= ಮನನಮಾಡುವವನು, ಬೋದ್ಧಾ= ನಿಶ್ಚಯಿಸುವವನು, **ಕರ್ತಾ**= ಕರ್ತೃವು, ವಿಜ್ಞಾನಾತ್ಮಾ = ವಿಜ್ಞಾತೃಸ್ವಭಾವದವನು **ಪುರುಷಃ** = ಪುರುಷನು; **ಸಃ** = ಅವನು **ಪರೇ ಅಕ್ಷರೇ ಆತ್ಮನಿ** = ಪರಮವೂ ಅಕ್ಷಯವೂ ಆದ ಆತ್ಮನಲ್ಲಿ **ಸಂಪ್ರತಿಷ್ಠತೇ** = ನೆಲಸುತ್ತಾನೆ.

೯. ಇವನೇ೧ ನೋಡುವವನೂ ಮುಟ್ಟುವವನೂ ಕೇಳುವವನೂ ಮೂಸುವವನೂ ಆಸ್ವಾದಿಸುವವನೂ ಮನನಮಾಡುವವನೂ ನಿಶ್ಚಯಿಸು

ವವನೂ ಕರ್ತೃವೂ ವಿಜ್ಞಾತೃಸ್ವಭಾವದವನೂ[2] ಪುರುಷನೂ[3] (ಆಗಿರುತ್ತಾನೆ); ಇವನು ಪರಮವೂ ಅಕ್ಷಯವೂ ಆದ ಆತ್ಮನಲ್ಲಿ ನೆಲಸುತ್ತಾನೆ.[4]

[[1] ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಂತೆ ಕರ್ತೃತ್ವ-ಭೋಕ್ತೃತ್ವರೂಪದಿಂದ ಇಲ್ಲಿ ಪ್ರವೇಶಿಸಿರುವ ಆತ್ಮರೂಪ.

[2] ಬುದ್ಧಿವಾಚಕವಲ್ಲ.

[3] ಶರೀರೇಂದ್ರಿಯಗಳ ಸಂಘಾತವೆಂಬ ಉಪಾಧಿಯನ್ನು ತುಂಬಿಕೊಂಡಿರುವುದರಿಂದ ಪುರುಷನು ಎನಿಸಿರುತ್ತಾನೆ.

[4] ಜಲಾಶಯವು ಬತ್ತಿಹೋದರೆ ಅದರಲ್ಲಿ ಕಾಣುತ್ತಿರುವ ಸೂರ್ಯನ ಪ್ರತಿಬಿಂಬವು ಸೂರ್ಯನಲ್ಲಿ ಹೋಗುವಂತೆ ಜೀವಾತ್ಮನು ಪರಮಾತ್ಮನಲ್ಲಿ ನೆಲಸುತ್ತಾನೆ.]

**ಪರಮೇವಾಕ್ಷರಂ ಪ್ರತಿಪದ್ಯತೇ ಸ ಯೋ ಹ ವೈ ತದಚ್ಛಾಯಮಶರೀರಮಲೋಹಿತಂ ಶುಭ್ರಮಕ್ಷರಂ ವೇದಯತೇ ಯಸ್ತು ಸೋಮ್ಯ, ಸ ಸರ್ವಜ್ಞಃ ಸರ್ವೋ ಭವತಿ ತದೇಷ ಶ್ಲೋಕಃ ॥ ೧೦ ॥**

ಯಃ ಹ ವೈ = ಯಾವನು ತತ್ = ಆ ಅಚ್ಛಾಯಂ=ನೆರಳಿಲ್ಲದ ಅಶರೀರಂ= ಶರೀರವಿಲ್ಲದ ಅಲೋಹಿತಂ = ಲೋಹಿತವಲ್ಲದ ಶುಭ್ರಂ = ಶುದ್ಧವಾದ ಅಕ್ಷರಂ = ಅಕ್ಷರವನ್ನು ವೇದಯತೇ = ತಿಳಿದುಕೊಳ್ಳುವನೊ ಸಃ = ಅವನು ಪರಮಂ ಅಕ್ಷರಂ = ಪರಮಾಕ್ಷರವನ್ನೇ ಪ್ರತಿಪದ್ಯತೇ = ಹೊಂದುತ್ತಾನೆ; ಸೋಮ್ಯ = ಎಲೈ ಸೋಮ್ಯನೆ, ಯಃ ತು = ಯಾವನು [ಹೀಗೆ ತಿಳಿದುಕೊಳ್ಳುವನೊ] ಸಃ = ಅವನು ಸರ್ವಜ್ಞಃ = ಸರ್ವಜ್ಞನೂ ಸರ್ವಃ = ಸರ್ವವೂ ಭವತಿ = ಆಗುವನು. ತತ್ = ಈ ವಿಷಯದಲ್ಲಿ ಏಷಃ ಶ್ಲೋಕಃ [ಭವತಿ] = ಈ ಮಂತ್ರವುಂಟು.

೧೦. ಯಾವನು ನೆರಳಿಲ್ಲದ[1] ಶರೀರವಿಲ್ಲದ[2] ಲೋಹಿತವಲ್ಲದ[3] ಶುದ್ಧವಾದ ಆ ಅಕ್ಷರವನ್ನು[4] ತಿಳಿದುಕೊಳ್ಳುವನೊ ಅವನು, ಎಲೈ ಸೋಮ್ಯ, ಪರಮಾಕ್ಷರವನ್ನೇ ಹೊಂದುತ್ತಾನೆ; ಯಾವನು (ಹೀಗೆ ತಿಳಿದುಕೊಳ್ಳುವನೊ) ಅವನು ಸರ್ವಜ್ಞನೂ ಸರ್ವವೂ[5] ಆಗುವನು. ಈ ವಿಷಯದಲ್ಲಿ ಈ ಮಂತ್ರವುಂಟು:

[[1] ತಮಸ್ಸಿಲ್ಲದ.

[2] ನಾಮರೂಪಗಳೇ ಮೊದಲಾದ ಉಪಾಧಿಗಳಿಂದ ಕೂಡಿದ ಶರೀರವಿಲ್ಲದ.

[3] ಕೆಂಪು ವರ್ಣವೇ ಮೊದಲಾದ ಯಾವ ಗುಣವೂ ಇಲ್ಲದ.

[4] ಪುರುಷನೆಂಬ ಹೆಸರಿನ ಅಕ್ಷರ ಸತ್ಯ. ಮು. ಉ. ೧, ೨, ೧೩ ನೋಡಿ.

[5] ಅವಿದ್ಯೆಯು ಹೋಗಿರುವುದರಿಂದ]

ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ
ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ ।
ತದಕ್ಷರಂ ವೇದಯತೇ ಯಸ್ತು ಸೋಮ್ಯ
ಸ ಸರ್ವಜ್ಞಃ ಸರ್ವಮೇವಾವಿವೇಶೇತಿ ॥ ೧೧ ॥

ಸೋಮ್ಯ=ಎಲೈ ಸೋಮ್ಯನೆ, ಸರ್ವೈಃ ದೇವೈಃ ಸಹ=ಎಲ್ಲ ದೇವತೆಗಳೊಂದಿಗೆ ವಿಜ್ಞಾನಾತ್ಮಾ ಚ=ವಿಜ್ಞಾನಾತ್ಮನು ಪ್ರಾಣಾಃ=ಪ್ರಾಣಗಳು ಭೂತಾನಿ–ಭೂತಗಳು ಯತ್ರ=ಎಲ್ಲಿ ಸಂಪ್ರತಿಷ್ಠಂತಿ=ನೆಲಸುವುವೊ, ತತ್ ಅಕ್ಷರಂ=ಆ ಅಕ್ಷರವನ್ನು ಯಃ ತು=ಯಾವನು ವೇದಯತೇ=ತಿಳಿದುಕೊಳ್ಳುವನೊ ಸಃ ಸರ್ವಜ್ಞಃ=ಆ ಸರ್ವಜ್ಞನು ಸರ್ವಂ ಏವ=ಸರ್ವವನ್ನೂ ಆವಿವೇಶ [ಆವಿಶತಿ]=ಪ್ರವೇಶಿಸುವನು ಇತಿ=ಎಂದು.

೧೧. ಎಲೈ ಸೋಮ್ಯ, ಎಲ್ಲ ದೇವತೆಗಳೊಂದಿಗೆ[೧] ವಿಜ್ಞಾನಾತ್ಮನು[೨] ಪ್ರಾಣಗಳು[೩] ಮತ್ತು ಭೂತಗಳು[೪] ನೆಲಸುವ ಆ ಅಕ್ಷರವನ್ನು ಯಾವನು ತಿಳಿದುಕೊಳ್ಳುವನೊ ಆ ಸರ್ವಜ್ಞನು ಸರ್ವವನ್ನೂ ಪ್ರವೇಶಿಸುವನು.

[[೧] ಅಗ್ನ್ಯಾದಿ ದೇವತೆಗಳೊಡನೆ.
[೨] ವಿಜ್ಞಾತೃಸ್ವರೂಪನಾದ ಆತ್ಮ.
[೩] ಕಣ್ಣು ಮೊದಲಾದ ಪ್ರಾಣಗಳು.
[೪] ಪೃಥಿವಿಯೇ ಮೊದಲಾದ ಭೂತಗಳು.]

# ಐದನೆಯ ಪ್ರಶ್ನೆ

**ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ । ಸ ಯೋ ಹ ವೈ ತದ್ಭಗವನ್ ಮನುಷ್ಯೇಷು ಪ್ರಾಯಣಾಂತಮೋಂಕಾರಮಭಿಧ್ಯಾಯೀತ, ಕತಮಂ ವಾವ ಸ ತೇನ ಲೋಕಂ ಜಯತೀತಿ । ತಸ್ಮೈ ಸ ಹೋವಾಚ ॥ ೧ ॥**

**ಅಥ ಹ** = ಅನಂತರ **ಶೈಬ್ಯಃ ಸತ್ಯಕಾಮಃ** = ಶೈಬ್ಯ ಸತ್ಯಕಾಮನು **ಏನಂ** = ಇವನನ್ನು **ಪಪ್ರಚ್ಛ** = ಪ್ರಶ್ನಿಸಿದನು **ಭಗವನ್** = ಭಗವಂತನೆ, **ಮನುಷ್ಯೇಷು** = ಮನುಷ್ಯರಲ್ಲಿ **ಸಃ ಯಃ ಹ ವೈ** = ಯಾವನು **ಪ್ರಾಯಣಾಂತಂ** = ಮರಣದ ವರೆಗೂ **ತತ್** = ಆ **ಓಂಕಾರಂ** = ಓಂಕಾರವನ್ನು **ಅಭಿಧ್ಯಾಯೀತ** = ಅಭಿಧ್ಯಾನಿಸುವನೊ, **ಸಃ** = ಅವನು **ತೇನ** = ಅದರಿಂದ **ಕತಮಂ ವಾವ ಲೋಕಂ** = ಯಾವ ಲೋಕವನ್ನು **ಜಯತಿ** = ಜಯಿಸುತ್ತಾನೆ **ಇತಿ** = ಎಂದು. **ಸಃ** = ಪಿಪ್ಪಲಾದನು **ತಸ್ಮೈ** = ಅವನಿಗೆ **ಉವಾಚ ಹ** = ಹೇಳಿದನು

೧. ಅನಂತರ ಶೈಬ್ಯ ಸತ್ಯಕಾಮನು ಇವನನ್ನು ಪ್ರಶ್ನಿಸಿದನು: ಎಲೈ ಭಗವಂತನೆ, ಮನುಷ್ಯರಲ್ಲಿ ಯಾವನು ಮರಣದ ವರೆಗೂ[೧] ಓಂಕಾರವನ್ನು ಅಭಿಧ್ಯಾನಿಸುವನೊ[೨] ಅವನು ಅದರಿಂದ ಯಾವ ಲೋಕವನ್ನು[೩] ಜಯಿಸುತ್ತಾನೆ? ಪಿಪ್ಪಲಾದನು ಅವನಿಗೆ ಹೇಳಿದನು:

[ಈಗ ಪರಾವರಬ್ರಹ್ಮಪ್ರಾಪ್ತಿಗೆ ಸಾಧನವಾದ ಪ್ರಣವದ ಉಪಾಸನೆಯನ್ನು ವಿಧಿಸಬೇಕೆಂದು ಈ ಪ್ರಶ್ನೆಯನ್ನು ಪ್ರಾರಂಭಿಸಿದೆ.

೧ ಯಾವಜ್ಜೀವವೂ.

೨ ಇಂದ್ರಿಯಗಳನ್ನು ತಮ್ಮ ವಿಷಯಗಳಿಂದ ಒಳಕ್ಕೆಳೆದುಕೊಂಡು ಸಮಾಹಿತಚಿತ್ತನಾಗಿ ಭಕ್ತಿಯಿಂದ ಓಂಕಾರವನ್ನೇ ಬ್ರಹ್ಮವೆಂದು ತಿಳಿದುಕೊಂಡು ಧ್ಯಾನಿಸಬೇಕು. ಈ ಸಮಯದಲ್ಲಿ ಬೇರೆ ಪ್ರತ್ಯಯಗಳು ಬರದಂತೆ ಮಾಡಿ ಆತ್ಮಪ್ರತ್ಯಯಗಳ ಪ್ರವಾಹವನ್ನು ಅವಿಚ್ಛಿನ್ನವಾಗಿ ಹರಿಯಿಸಿದರೆ ಅಭಿಧ್ಯಾನವಾಗುತ್ತದೆ. ಈ ಸ್ಥಿತಿಯನ್ನು ಹೊಂದಲು ಸತ್ಯ ಬ್ರಹ್ಮಚರ್ಯ ಇವೇ ಮೊದಲಾದುವು ಸಹಾಯಕವಾಗಿರುತ್ತವೆ.

೩ ಜ್ಞಾನಕರ್ಮಗಳಿಂದ ಪಡೆದುಕೊಳ್ಳಬಹುದಾದ ಲೋಕಗಳಲ್ಲಿ.]

**ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇನೈವಾಯತನೇನೈಕತರಮನ್ವೇತಿ ॥ ೨ ॥**

**ಸತ್ಯಕಾಮ** = ಎಲೈ ಸತ್ಯಕಾಮನೆ, **ಯತ್ ಏತತ್ ವೈ** = ಈ ಯಾವುದು **ಪರಂ ಚ** = ಪರಬ್ರಹ್ಮವೆಂದೂ **ಅಪರಂ ಬ್ರಹ್ಮ ಚ** = ಅಪರಬ್ರಹ್ಮವೆಂದೂ [ಇದೆಯೊ ಅವೆರಡೂ] **ಓಂಕಾರಃ** = ಓಂಕಾರವು. **ತಸ್ಮಾತ್** = ಆದುದರಿಂದ **ವಿದ್ವಾನ್** = ತಿಳಿದವನು **ಏತೇನ ಏವ ಆಯತನೇನ** = ಈ ಆಲಂಬನೆಯಿಂದಲೇ **ಏಕತರಂ**=ಇವೆರಡರಲ್ಲಿ ಒಂದನ್ನು **ಅನ್ವೇತಿ** = ಅನುಸರಿಸುತ್ತಾನೆ.

೨. ಎಲೈ ಸತ್ಯಕಾಮ, ಓಂಕಾರವೇ[೧] ಪರಬ್ರಹ್ಮವೂ ಅಪರಬ್ರಹ್ಮವೂ ಆಗಿದೆ. ಆದುದರಿಂದ ತಿಳಿದವನು ಈ ಆಲಂಬನೆಯಿಂದಲೇ ಇವೆರಡರಲ್ಲಿ ಒಂದನ್ನು ಅನುಸರಿಸುತ್ತಾನೆ.[೨]

[[೧] ಬ್ರಹ್ಮದಲ್ಲಿ ಯಾವ ವಿಶೇಷ ಧರ್ಮವೂ ಇಲ್ಲದಿರುವುದರಿಂದಲೂ ಅತೀಂದ್ರಿಯಗೋಚರವಾಗಿರುವುದರಿಂದಲೂ ಮನಸ್ಸಿನಿಂದ ಗ್ರಹಿಸಲು ಸಾಧ್ಯವಲ್ಲ ಹೀಗಿದ್ದರೂ ವಿಷ್ಣುವೇ ಮೊದಲಾದ ದೇವತೆಗಳ ಪ್ರತಿಮಾಸ್ಥಾನೀಯವಾದ ಓಂಕಾರದಲ್ಲಿ ಭಕ್ತಿಯಿಂದ ಬ್ರಹ್ಮಭಾವವನ್ನಿಟ್ಟರೆ ಪರಬ್ರಹ್ಮವಾಗಲಿ ಅಪರಬ್ರಹ್ಮವಾಗಲಿ ಉಪಾಸಕರಿಗೆ ಪ್ರಸನ್ನವಾಗುತ್ತದೆ.

[೨] ಏಕೆಂದರೆ ಓಂಕಾರವು ಬ್ರಹ್ಮಕ್ಕೆ ಅತ್ಯಂತ ಸಮೀಪದಲ್ಲಿರುವ ಆಲಂಬನವಾಗಿರುತ್ತದೆ.]

**ಸ ಯದ್ಯೇಕಮಾತ್ರಮಭಿಧ್ಯಾಯೀತ, ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ । ತಮೃಚೋ ಮನುಷ್ಯಲೋಕಮುಪನಯಂತೇ, ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ ॥ ೩ ॥**

**ಸಃ** = ಅವನು **ಏಕಮಾತ್ರಂ** = ಒಂದನೆಯ ಮಾತ್ರೆಯನ್ನು **ಯದಿ ಅಭಿಧ್ಯಾಯೀತ** = ಅಭಿಧ್ಯಾನಿಸಿದರೆ **ಸಃ** = ಅವನು **ತೇನ ಏವ** = ಅದರಿಂದಲೇ **ಸಂವೇದಿತಃ**= ತಿಳಿದುಕೊಂಡವನಾಗಿ **ತೂರ್ಣಂ ಏವ** = ಕೂಡಲೇ **ಜಗತ್ಯಾಂ**= ಜಗತ್ತಿನಲ್ಲಿ [**ಮನುಷ್ಯಲೋಕಂ**=ಮನುಷ್ಯಜನ್ಮವನ್ನು] **ಅಭಿಸಂಪದ್ಯತೇ**=ಹೊಂದುತ್ತಾನೆ. **ಋಚಃ** = ಋಕ್ಕುಗಳು **ತಂ** = ಅವನನ್ನು **ಮನುಷ್ಯಲೋಕಂ** = ಮನುಷ್ಯಜನ್ಮಕ್ಕೆ **ಉಪನಯಂತೇ** = ಸೇರಿಸುತ್ತವೆ. **ಸಃ** = ಅವನು **ತತ್ರ** = ಅಲ್ಲಿ **ತಪಸಾ** = ತಪಸ್ಸಿನಿಂದಲೂ **ಬಹ್ಮಚರ್ಯೇಣ**=ಬ್ರಹ್ಮಚರ್ಯದಿಂದಲೂ **ಶ್ರದ್ಧಯಾ**=ಶ್ರದ್ಧೆಯಿಂದಲೂ **ಸಂಪನ್ನಃ** = ಕೂಡಿದವನಾಗಿ **ಮಹಿಮಾನಂ** = ಮಹಿಮೆಯನ್ನು **ಅನುಭವತಿ** = ಅನುಭವಿಸುತ್ತಾನೆ.

೩. ಅವನು ಮೊದಲನೆಯ ಮಾತ್ರೆಯನ್ನು ಅಭಿಧ್ಯಾನಿಸಿದರೆ ಅದರಿಂದಲೇ ತಿಳಿದುಕೊಂಡವನಾಗಿ ಜಗತ್ತಿನಲ್ಲಿ ಕೂಡಲೇ (ಮನುಷ್ಯಜನ್ಮವನ್ನು)

ಹೊಂದುತ್ತಾನೆ.[೧] ಋಕ್ಕುಗಳು ಅವನನ್ನು ಮನುಷ್ಯಜನ್ಮಕ್ಕೆ ಸೇರಿಸುತ್ತವೆ. ಅವನು ಅಲ್ಲಿ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ಕೂಡಿದವನಾಗಿ ಮಹಿಮೆಯನ್ನು ಅನುಭವಿಸುತ್ತಾನೆ.[೨]

[ಅವನು ಓಂಕಾರದ ಎಲ್ಲ ಮಾತ್ರೆಗಳ ವಿಭಾಗವನ್ನು ತಿಳಿಯದವನಾಗಿದ್ದರೂ ಓಂಕಾರಾಭಿಧ್ಯಾನದ ಪ್ರಭಾವದಿಂದ ವಿಶಿಷ್ಟವಾದ ಗತಿಯನ್ನೇ ಹೊಂದುತ್ತಾನೆ.

೧ ಏಕೆಂದರೆ ಓಂಕಾರದ ಮೊದಲನೆಯದೂ ಋಗ್ವೇದರೂಪವೂ ಆದ ಅಕಾರ ವೆಂಬ ಒಂದು ಮಾತ್ರೆಯನ್ನು ಸಾಧಕನು ಅಭಿಧ್ಯಾನಿಸಿರುತ್ತಾನೆ.

೨ ಕರ್ಮಜ್ಞಾನಗಳಿಂದ ಭ್ರಷ್ಟನಾಗಿ ದುರ್ಗತಿಯನ್ನು ಹೊಂದುವುದಿಲ್ಲ. ಗೀತಾ, ೬, ೪೧ ನೋಡಿ.]

**ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽಂತರಿಕ್ಷಂ ಯಜುರ್ಭಿರುನ್ನೀಯತೇ ಸೋಮಲೋಕಮ್ । ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ ॥ ೪ ॥**

**ಅಥ** = ಪುನಃ **ದ್ವಿಮಾತ್ರೇಣ** = ಎರಡನೆಯ ಮಾತ್ರೆಯಿಂದ **ಯದಿ** [ಅಭಿಧ್ಯಾಯೀತ] = ಅಭಿಧ್ಯಾನಿಸಿದರೆ [ತದಾ=ಆಗ] **ಮನಸಿ**=ಮನಸ್ಸಿನಲ್ಲಿ **ಸಂಪದ್ಯತೇ**= ಆತ್ಮಭಾವವನ್ನು ಹೊಂದುತ್ತಾನೆ; **ಸಃ**=ಅವನು [ಮೃತನಾದ ಮೇಲೆ] **ಯಜುರ್ಭಿಃ**= ಯಜುಸ್ಸುಗಳಿಂದ **ಅಂತರಿಕ್ಷಂ ಸೋಮಲೋಕಂ** = ಅಂತರಿಕ್ಷದಲ್ಲಿರುವ ಸೋಮ ಲೋಕಕ್ಕೆ **ಉನ್ನೀಯತೇ**=ಒಯ್ಯಲ್ಪಡುತ್ತಾನೆ. **ಸಃ**=ಅವನು **ಸೋಮಲೋಕೇ**= ಸೋಮಲೋಕದಲ್ಲಿ **ವಿಭೂತಿಂ** = ಐಶ್ವರ್ಯವನ್ನು **ಅನುಭೂಯ** = ಅನುಭವಿಸಿ **ಪುನಃ ಆವರ್ತತೇ** = ಪುನಃ ಹಿಂದಿರುಗುತ್ತಾನೆ.

**೪.** ಪುನಃ ಎರಡನೆಯ ಮಾತ್ರೆಯಿಂದ[೧] (ಅಭಿಧ್ಯಾನಿಸಿದರೆ ಆಗ ಅವನು) ಮನಸ್ಸಿನಲ್ಲಿ[೨] ಆತ್ಮಭಾವವನ್ನು ಹೊಂದುತ್ತಾನೆ. ಅವನು ಮೃತ ನಾದ ಮೇಲೆ ಯಜುಸ್ಸುಗಳಿಂದ[೩] ಅಂತರಿಕ್ಷದಲ್ಲಿರುವ ಸೋಮಲೋಕಕ್ಕೆ[೪] ಒಯ್ಯಲ್ಪಡುತ್ತಾನೆ. ಅವನು ಸೋಮಲೋಕದಲ್ಲಿ ಐಶ್ವರ್ಯವನ್ನು ಅನು ಭವಿಸಿ ಪುನಃ ಹಿಂತಿರುಗುತ್ತಾನೆ.

[೧ ಉಕಾರ; 'ದ್ವಿತೀಯಮಾತ್ರತ್ವೇನ ವಿಶಿಷ್ಟಂ ಓಂಕಾರಂ ತದ್ಗತಂ ಉಕಾರಂ ಇತ್ಯರ್ಥಃ'

೨ ಸ್ವಪ್ನರೂಪವಾದ ಚಂದ್ರನೇ ಅಧಿಷ್ಠಾನ ದೇವತೆಯಾಗಿರುವ ಮತ್ತು ಯಜು-ರ್ಮಯವಾದ ಮನಸ್ಸಿನಲ್ಲಿ.

[3] ದ್ವಿತೀಯ ಮಾತ್ರಾರೂಪವಾದ ಯಜುಸ್ಸುಗಳಿಂದ.
[4] ದ್ವಿತೀಯ ಮಾತ್ರಾರೂಪವಾದ ಸೋಮಲೋಕದಲ್ಲಿ ಜನ್ಮವನ್ನು ಹೊಂದುತ್ತಾನೆ.]

"ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ, ಸ ತೇಜಸಿ ಸೂರ್ಯೇ ಸಂಪನ್ನಃ। ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ"ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ," ಸ ಏತಸ್ಮಾಜ್ಜೀವಘನಾತ್ "ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ" ತದೇತೌ ಶ್ಲೋಕೌ ಭವತಃ ॥ ೫ ॥

ಯಃ ಪುನಃ = ಆದರೆ ಯಾವನು ತ್ರಿಮಾತ್ರೇಣ = ಮೂರು ಮಾತ್ರೆಗಳುಳ್ಳ ಓಂ ಇತಿ = ಓಂ ಎಂಬ ಏತೇನ ಏವ ಅಕ್ಷರೇಣ = ಈ ಅಕ್ಷರದಿಂದಲೇ ಏತಂ = ಈ ಪರಂ ಪುರುಷಂ = ಪರಮಪುರುಷನನ್ನು ಅಭಿಧ್ಯಾಯೀತ = ಅಭಿಧ್ಯಾನಿಸುವನೊ ಸಃ = ಅವನು ತೇಜಸಿ ಸೂರ್ಯೇ = ಜ್ಯೋತಿರ್ಮಯನಾದ ಸೂರ್ಯನಲ್ಲಿ ಸಂಪನ್ನಃ [ಭವತಿ] = ಒಂದಾಗುತ್ತಾನೆ. ಯಥಾ = ಹೇಗೆ ಪಾದೋದರಃ = ಸರ್ಪವು ತ್ವಚಾ = ಪರೆಯಿಂದ ವಿನಿರ್ಮುಚ್ಯತೇ = ಬಿಡಲ್ಪಡುತ್ತದೆಯೊ ಏವಂ ಹ ವೈ = ಹಾಗೆಯೇ ಸಃ = ಅವನು ಪಾಪ್ಮನಾ = ಪಾಪದಿಂದ ವಿನಿರ್ಮುಕ್ತಃ = ಬಿಡಲ್ಪಡುತ್ತಾನೆ ಸಃ = ಅವನು ಸಾಮಭಿಃ = ಸಾಮಗಳಿಂದ ಬ್ರಹ್ಮಲೋಕಂ = ಬ್ರಹ್ಮಲೋಕಕ್ಕೆ ಉನ್ನೀಯತೇ = ಒಯ್ಯಲ್ಪಡುತ್ತಾನೆ. ಸಃ = ಅವನು ಏತಸ್ಮಾತ್ = ಈ ಪರಾತ್ = ಶ್ರೇಷ್ಠನಾದ ಜೀವಘನಾತ್ = ಹಿರಣ್ಯಗರ್ಭನಿಗಿಂತಲೂ ಪರಂ = ಶ್ರೇಷ್ಠನಾದ ಪುರಿಶಯಂ = ಎಲ್ಲ ಶರೀರಗಳಲ್ಲಿಯೂ ಪ್ರವೇಶಿಸಿರುವ ಪುರುಷಂ = ಪುರುಷನನ್ನು ಈಕ್ಷತೇ = ಸಾಕ್ಷಾತ್ಕರಿಸುತ್ತಾನೆ ತತ್ = ಈ ವಿಷಯದಲ್ಲಿ ಏತೌ ಶ್ಲೋಕೌ = ಈ ಎರಡು ಮಂತ್ರಗಳು ಭವತಃ = ಇವೆ

**೫.** ಆದರೆ ಯಾವನು ಮೂರು ಮಾತ್ರೆಗಳುಳ್ಳ[1] ಓಂ ಎಂಬ ಈ ಅಕ್ಷರದಿಂದಲೇ[2] ಈ ಪರಮಪುರುಷನನ್ನು ಅಭಿಧ್ಯಾನಿಸುವನೊ ಅವನು ಜ್ಯೋತಿರ್ಮಯನಾದ ಸೂರ್ಯನಲ್ಲಿ ಒಂದಾಗುತ್ತಾನೆ.[3] ಸರ್ಪವು ಹೇಗೆ ಪರೆಯಿಂದ ಹೊರಕ್ಕೆ ಬರುತ್ತದೆಯೊ ಹಾಗೆಯೇ ಪಾಪದಿಂದ ಮುಕ್ತನಾಗುತ್ತಾನೆ. ಅವನು ಸಾಮಗಳಿಂದ[4] ಬ್ರಹ್ಮಲೋಕಕ್ಕೆ[5] ಒಯ್ಯಲ್ಪಡುತ್ತಾನೆ. ಅವನು ಶ್ರೇಷ್ಠನಾದ ಹಿರಣ್ಯಗರ್ಭನಿಗಿಂತಲೂ ಶ್ರೇಷ್ಠನಾದ ಮತ್ತು ಎಲ್ಲ ಶರೀರಗಳಲ್ಲಿಯೂ ಪ್ರವೇಶಿಸಿರುವ ಪುರುಷನನ್ನು ಸಾಕ್ಷಾತ್ಕರಿಸುತ್ತಾನೆ. ಈ ವಿಷಯದಲ್ಲಿ ಈ ಎರಡು ಮಂತ್ರಗಳಿವೆ.

[[೧] ಮೂರು ಮಾತ್ರೆಗಳ ವಿಷಯದ ವಿಜ್ಞಾನದಿಂದ ಕೂಡಿದ.

[೨] ಪ್ರತೀಕದಿಂದ.

[೩] ಸೂರ್ಯಲೋಕದಿಂದ ಹಿಂತಿರುಗುವುದಿಲ್ಲ, ಕ್ರಮವಾಗಿ ಮುಕ್ತಿಯನ್ನು ಹೊಂದುತ್ತಾನೆ

[೪] ಮೂರನೆಯ ಮಾತ್ರೆಯ ರೂಪವಾಗಿರುವ.

[೫] ಸತ್ಯವೆಂಬ ಹೆಸರುಳ್ಳ ಹಿರಣ್ಯಗರ್ಭನ ಲೋಕ. ಹಿರಣ್ಯಗರ್ಭನು ಸಂಸಾರಿ ಜೀವಾತ್ಮರಿಗೆಲ್ಲ ಆತ್ಮರೂಪನಾಗಿರುತ್ತಾನೆ ಎಲ್ಲ ಜೀವಾತ್ಮರು ಲಿಂಗಾತ್ಮನಾದ ಅವ ನಲ್ಲಿ ಕೂಡಿರುವುದರಿಂದ ಅವನಿಗೆ ಜೀವಘನನೆಂದು ಹೆಸರು ]

**ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ**
**ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।**
**ಕ್ರಿಯಾಸು ಬಾಹ್ಯಾಭ್ಯಂತರಮಧ್ಯಮಾಸು**
**ಸಮ್ಯಕ್ಪ್ರಯುಕ್ತಾಸು ನ ಕಂಪತೇ ಜ್ಞಃ　　॥ ೬ ॥**

ಅನ್ಯೋನ್ಯಸಕ್ತಾಃ = ಪರಸ್ಪರಸಂಬಂಧವುಳ್ಳ ತಿಸ್ರಃ = ಮೂರು ಮಾತ್ರಾಃ = ಮಾತ್ರೆಗಳು ಅನವಿಪ್ರಯುಕ್ತಾಃ = ಒಂದೊಂದೇ ವಿಷಯದಲ್ಲಿ ವಿಶೇಷವಾಗಿ ಪ್ರ-ಯುಕ್ತಾಃ = ಪ್ರಯೋಗಿಸಲ್ಪಟ್ಟರೆ ಮೃತ್ಯುಮತ್ಯಃ = ಮೃತ್ಯುವಿನ ಅಧೀನವಾಗು ವುವು ಬಾಹ್ಯಾಭ್ಯಂತರಮಧ್ಯಮಾಸು ಕ್ರಿಯಾಸು = ಹೊರಗಿನ ಒಳಗಿನ ಮಧ್ಯದ ಕ್ರಿಯೆಗಳು ಸಮ್ಯಕ್ ಪ್ರಯುಕ್ತಾಸು = ಚೆನ್ನಾಗಿ ಪ್ರಯೋಗಿಸಲ್ಪಟ್ಟರ ಜ್ಞಃ = ಜ್ಞಾನಿಯು ನ ಕಂಪತೇ = ಕಂಪಿಸುವುದಿಲ್ಲ

೬. ಪರಸ್ಪರ ಸಂಬಂಧವುಳ್ಳ ಮೂರು ಮಾತ್ರೆಗಳನ್ನು[೧] ಒಂದೊಂದೇ ವಿಷಯದಲ್ಲಿ[೨] ವಿಶೇಷವಾಗಿ ಪ್ರಯೋಗಿಸಿದರೆ ಅವು ಮೃತ್ಯುವಿನ ಅಧೀನವಾಗು ವುವು.[೩] ಹೊರಗಿನ ಒಳಗಿನ ಮಧ್ಯದ ಕ್ರಿಯೆಗಳನ್ನು[೪] ಚೆನ್ನಾಗಿ ಮಾಡಿದರೆ ಜ್ಞಾನಿಯು ಕಂಪಿಸುವುದಿಲ್ಲ.[೫]

[[೧] ಅಕಾರ-ಉಕಾರ-ಮಕಾರಗಳನ್ನು.

[೨] ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಅವಸ್ಥೆಗಳಲ್ಲಿ ಒಂದೊಂದೇ ಅವಸ್ಥೆಯ ಪುರು-ಷನನ್ನು ಧ್ಯಾನಿಸಲು ತ್ರಿಮಾತ್ರೆಗಳನ್ನು ಪ್ರಯೋಗಿಸಿದರೆ.

[೩] ಅಮೃತತ್ವವನ್ನು ಕೊಡುವುದಿಲ್ಲ.

[೪] ಧ್ಯಾನಕಾಲದಲ್ಲಿ ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಯಲ್ಲಿರುವ ಪುರುಷನನ್ನು ಓಂಕಾರರೂಪದಿಂದ ಧ್ಯಾನಿಸಿದರೆ.

೫ ಹೀಗೆ ತಿಳಿದುಕೊಂಡಿರುವ ಉಪಾಸಕನು ಸರ್ವಾತ್ಮನಾಗಿ ಓಂಕಾರಮಯನಾಗಿ ರುವುದರಿಂದ ಎಲ್ಲಿಂದ ಅಥವಾ ಎಲ್ಲಿಗೆ ಹೋಗಬಲ್ಲನು?]

**ಋಗ್ಭಿರೇತಂ ಯಜುರ್ಭಿರಂತರಿಕ್ಷಂ**
**ಸಾಮಭಿರ್ಯತ್ತತ್ ಕವಯೋ ವೇದಯಂತೇ ।**
**ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್**
**ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ ॥ ೭ ॥**

ಋಗ್ಭಿಃ = ಋಕ್ಕುಗಳಿಂದ ಏತಂ [ಲೋಕಂ] = ಈ ಲೋಕವನ್ನೂ, ಯಜುರ್ಭಿಃ = ಯಜುಸ್ಸುಗಳಿಂದ ಅಂತರಿಕ್ಷಂ = ಅಂತರಿಕ್ಷವನ್ನೂ, ಸಾಮಭಿಃ = ಸಾಮಗಳಿಂದ ಯತ್ ತತ್ = ಯಾವ ಅದನ್ನು ಕವಯಃ = ಕವಿಗಳು ವೇದಯಂತೇ = ತಿಳಿದಿರುವರೊ ತಂ = ಅದನ್ನೂ, ಓಂಕಾರೇಣ = ಓಂಕಾರವೆಂಬ ಆಯತನೇನ ಏವ = ಆಯತನದಿಂದಲೇ ವಿದ್ವಾನ್ = ವಿದ್ವಾಂಸನು ಅನ್ವೇತಿ = ಹೊಂದುತ್ತಾನೆ. ಯತ್ = ಯಾವುದು ಶಾಂತಂ = ಶಾಂತವಾದ ಅಜರಂ = ಜರೆಯಿಲ್ಲದ ಅಮೃತಂ = ಅಮೃತವಾದ ಅಭಯಂ = ಅಭಯವಾದ ಪರಂ = ಪರಬ್ರಹ್ಮವೊ ತತ್ ಚ = ಅದನ್ನೂ [ಓಂಕಾರದಿಂದಲೇ ಹೊಂದುತ್ತಾನೆ]

೭. ಋಕ್ಕುಗಳಿಂದ ಈ ಲೋಕವನ್ನೂ, ಯಜುಸ್ಸುಗಳಿಂದ ಅಂತರಿಕ್ಷವನ್ನೂ, ಸಾಮಗಳಿಂದ—ಯಾವುದನ್ನು ಕವಿಗಳು ತಿಳಿದಿರುವರೊ—ಅದನ್ನೂ[೧] ವಿದ್ವಾಂಸನು ಓಂಕಾರವೆಂಬ ಆಲಂಬನದಿಂದಲೇ ಹೊಂದುತ್ತಾನೆ. ಅವನು ಶಾಂತವಾದ[೨] ಜರೆಯಿಲ್ಲದ ಅಮೃತವಾದ ಅಭಯವಾದ ಪರಬ್ರಹ್ಮವನ್ನೂ (ಓಂಕಾರದಿಂದಲೇ ಹೊಂದುತ್ತಾನೆ.)

[೧ ಬ್ರಹ್ಮಲೋಕವನ್ನು, ಇದು ಮನುಷ್ಯ ಮತ್ತು ಅಂತರಿಕ್ಷ ಲೋಕಗಳೊಂದಿಗೆ ಅಪರಬ್ರಹ್ಮರೂಪವಾಗಿದೆ.

೨ ಜಾಗ್ರತ್-ಸ್ವಪ್ನ-ಸುಷುಪ್ತಿಯೇ ಮೊದಲಾದ ಅವಸ್ಥೆಗಳಿಲ್ಲದ ಮತ್ತು ಸರ್ವ ಪ್ರಪಂಚವರ್ಜಿತವಾದ.]

# ಆರನೆಯ ಪ್ರಶ್ನೆ

ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ । ಭಗವನ್ ಹಿರಣ್ಯನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೇತ್ಯೈತಂ ಪ್ರಶ್ನಮಪೃಚ್ಛತ । 'ಷೋಡಶಕಲಂ ಭಾರದ್ವಾಜ ಪುರುಷಂ ವೇತ್ಥ?' ತಮಹಂ ಕುಮಾರಮಬ್ರುವಂ 'ನಾಹಮಿಮಂ ವೇದ, ಯದ್ಯಹಮಿಮಮವೇದಿಷಂ ಕಥಂ ತೇ ನಾವಕ್ಷ್ಯಮ್' ಇತಿ; 'ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ ತಸ್ಮಾನ್ನಾರ್ಹಾಮ್ಯನೃತಂ ವಕ್ತುಮ್;' ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ । ತಂ ತ್ವಾ ಪೃಚ್ಛಾಮಿ 'ಕ್ವಾಸೌ ಪುರುಷ' ಇತಿ ॥ ೧ ॥

ಅಥ ಹ = ಅನಂತರ ಸುಕೇಶಾ ಭಾರದ್ವಾಜಃ = ಸುಕೇಶ ಭಾರದ್ವಾಜನು ಏನಂ=ಇವನನ್ನು ಪಪ್ರಚ್ಛ = ಪ್ರಶ್ನಿಸಿದನು ಭಗವನ್ = ಭಗವಂತನೆ ಕೌಸಲ್ಯಃ = ಕೋಸಲದೇಶದಲ್ಲಿ ಹುಟ್ಟಿದ ರಾಜಪುತ್ರಃ = ರಾಜಪುತ್ರನಾದ ಹಿರಣ್ಯನಾಭಃ = ಹಿರಣ್ಯನಾಭನು ಮಾಂ ಉಪೇತ್ಯ = ನನ್ನ ಬಳಿಗೆ ಬಂದು ಏತಂ ಪ್ರಶ್ನಂ = ಈ ಪ್ರಶ್ನೆಯನ್ನು ಪಪ್ರಚ್ಛ=ಕೇಳಿದನು—ಭಾರದ್ವಾಜ = ಭಾರದ್ವಾಜನೆ, ಷೋಡಶಕಲಂ = ಹದಿನಾರು ಕಲೆಗಳುಳ್ಳ ಪುರುಷಂ = ಪುರುಷನನ್ನು ವೇತ್ಥ = ತಿಳಿದಿರುವೆಯು? ಅಹಂ = ನಾನು ತಂ ಕುಮಾರಂ = ಆ ಕುಮಾರನಿಗೆ ಅಬ್ರುವಂ = ಹೇಳಿದೆನು— ಅಹಂ = ನಾನು ಇಮಂ = ಇವನನ್ನು ನ ವೇದ = ತಿಳಿದಿಲ್ಲ. ಅಹಂ = ನಾನು ಇಮಂ = ಇವನನ್ನು ಯದಿ ಅವೇದಿಷಂ = ತಿಳಿದಿದ್ದರೆ ತೇ = ನಿನಗೆ ಕಥಂ = ಹೇಗೆ ನ ಅವಕ್ಷ್ಯಂ = ಹೇಳದೆ ಇರುತ್ತಿದ್ದೆನು ಇತಿ=ಎಂದು. ಯಃ = ಯಾವನು ಅನೃತಂ= ಅನೃತವನ್ನು ಅಭಿವದತಿ = ಹೇಳುವನೊ, ಏಷಃ ವೈ = ಇವನು ಸಮೂಲಃ = ಬೇರು ಸಹಿತ ಪರಿಶುಷ್ಯತಿ = ಒಣಗಿಹೋಗುವನು; ತಸ್ಮಾತ್ = ಆದುದರಿಂದ ಅನೃತಂ = ಅನೃತವನ್ನು ವಕ್ತುಂ = ಹೇಳಲು ನ ಅರ್ಹಾಮಿ = ಅರ್ಹನಲ್ಲ. ಸಃ = ಆ ರಾಜ ಕುಮಾರನು ತೂಷ್ಣೀಂ = ಮಾತನಾಡದೆ ರಥಂ = ರಥವನ್ನು ಆರುಹ್ಯ = ಏರಿ ಪ್ರವವ್ರಾಜ = ಹೊರಟುಹೋದನು. ತಂ = ಅವನನ್ನು [ಅವನ ವಿಷಯವಾಗಿ] ತ್ವಾ= ನಿನ್ನನ್ನು ಪೃಚ್ಛಾಮಿ = ಕೇಳುತ್ತಿದ್ದೇನೆ. ಅಸೌ = ಆ ಪುರುಷಃ = ಪುರುಷನು ಕ್ವ= ಎಲ್ಲಿರುವನು ಇತಿ = ಎಂದು.

೧. ಅನಂತರ ಸುಕೇಶ ಭಾರದ್ವಾಜನು ಪಿಪ್ಪಲಾದನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಕೋಸಲದೇಶದ ರಾಜಪುತ್ರನಾದ ಹಿರಣ್ಯನಾಭನು ನನ್ನ ಬಳಿಗೆ ಬಂದು ಈ ಪ್ರಶ್ನೆಯನ್ನು ಕೇಳಿದನು—'ಭಾರದ್ವಾಜ, ಹದಿನಾರು

ಕಲೆಗಳುಳ್ಳ[೧] ಪುರುಷನನ್ನು ನೀನು ತಿಳಿದಿರುವೆಯ?' ನಾನು ಆ ಕುಮಾರನಿಗೆ ಹೇಳಿದೆನು—'ನಾನು ಇವನನ್ನು ತಿಳಿದಿಲ್ಲ. ನಾನು ಇವನನ್ನು ತಿಳಿದಿದ್ದರೆ ನಿನಗೆ ಹೇಳದೆ ಹೇಗೆ ಇರುತ್ತಿದ್ದೆನು? ಯಾವನು ಅನೃತವನ್ನು ಹೇಳುವನೊ ಅವನು ಬೇರುಸಹಿತ ಒಣಗಿಹೋಗುವನು. ಆದುದರಿಂದ ಅನೃತವನ್ನು ನಾನು ಹೇಳುವುದಿಲ್ಲ.' ಅವನು ಮಾತನಾಡದೆ ರಥವನ್ನೇರಿ ಹೊರಟು ಹೋದನು. ಅವನ ವಿಷಯವಾಗಿ ನಿನ್ನನ್ನು ಕೇಳುತ್ತಿದ್ದೇನೆ; ಆ ಪುರುಷನು ಎಲ್ಲಿರುವನು?

[ಸತ್ಯನೂ ಅಕ್ಷರನೂ ಆದ ಪುರುಷನನ್ನು ಎಲ್ಲಿ ತಿಳಿದುಕೊಳ್ಳಬೇಕು? ಇದನ್ನು ತಿಳಿಸಲು ಆರನೆಯ ಪ್ರಶ್ನೆಯನ್ನು ಆರಂಭಿಸಿದೆ.

೧ ಅವಯುವಗಳಂತೆ ಆತ್ಮನಲ್ಲಿ ಅವಿದ್ಯೆಯಿಂದ ಆರೋಪಿತವಾಗಿರುವ ರೂಪಗಳು; ಏಕೆಂದರೆ ಅವು ನಿಜವಾಗಿಯೂ ಆತ್ಮನಿಗೆ ಸೇರಿರುವುದಿಲ್ಲ]

**ತಸ್ಮೈ ಸ ಹೋವಾಚ । ಇಹೈವಾಂತಃಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶ ಕಲಾಃ ಪ್ರಭವಂತೀತಿ ॥ ೨ ॥**

ಸಃ = ಪಿಪ್ಪಲಾದನು ತಸ್ಮೈ = ಅವನಿಗೆ ಉವಾಚ ಹ = ಹೇಳಿದನು· **ಸೋಮ್ಯ** = ಎಲೈ ಸೋಮ್ಯನೆ, **ಯಸ್ಮಿನ್** = ಯಾವನಲ್ಲಿ ಏತಾಃ **ಷೋಡಶ ಕಲಾಃ** = ಈ ಹದಿನಾರು ಕಲೆಗಳು ಪ್ರಭವಂತಿ = ಉತ್ಪನ್ನವಾಗುತ್ತಿರುವುವೊ ಸಃ **ಪುರುಷಃ** = ಆ ಪುರುಷನು ಇಹ ಏವ = ಇಲ್ಲಿಯೇ ಅಂತಃಶರೀರೇ = ಶರೀರದಲ್ಲಿ [**ವರ್ತತೇ** = ಇರುತ್ತಾನೆ].

೨. ಪಿಪ್ಪಲಾದನು ಅವನಿಗೆ ಹೇಳಿದನು. ಎಲೈ ಸೋಮ್ಯ, ಯಾವನಲ್ಲಿ ಈ ಹದಿನಾರು ಕಲೆಗಳು ಉತ್ಪನ್ನವಾಗುತ್ತಿರುವುವೊ ಆ ಪುರುಷನು ಈ ಶರೀರದಲ್ಲಿ (ಇರುತ್ತಾನೆ).

[ಆತ್ಮನನ್ನು ಈ ಶರೀರದಲ್ಲಿ ಎಂದರೆ ಹೃದಯಕಮಲದಲ್ಲಿರುವ ಆಕಾಶದಲ್ಲಿಯೇ ಅರಿಯಬೇಕು, ಬೇರೊಂದು ಕಡೆ ಅರಿಯಲು ಸಾಧ್ಯವಿಲ್ಲ. ಅವನಲ್ಲಿ ಉತ್ಪನ್ನವಾಗುವ ಹದಿನಾರು ಕಲೆಗಳನ್ನು ಮುಂದೆ ಬರುವ ನಾಲ್ಕನೆಯ ಮಂತ್ರದಲ್ಲಿ ಹೇಳಿದೆ.]

**ಸ ಈಕ್ಷಾಂಚಕ್ರೇ । ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ॥ ೩ ॥**

ಸಃ = ಅವನು ಈಕ್ಷಾಂಚಕ್ರೇ = ಆಲೋಚನೆ ಮಾಡಿದನು· ಕಸ್ಮಿನ್ ಉತ್ಕ್ರಾಂತೇ = ಯಾವನು ಉತ್ಕ್ರಮಿಸಿದರೆ ಅಹಂ = ನಾನು ಉತ್ಕ್ರಾಂತಃ ಭವಿಷ್ಯಾಮಿ = ಉತ್ಕ್ರಮಿಸುವೆನು? ಕಸ್ಮಿನ್ ವಾ ಪ್ರತಿಷ್ಠಿತೇ = ಯಾವನು ನಿಂತು ಕೊಂಡರೆ ಪ್ರತಿಷ್ಠಾಸ್ಯಾಮಿ = ನಾನು ನಿಲ್ಲುವೆನು ಇತಿ = ಎಂದು.

೩. ಷೋಡಶಕಲೆಗಳುಳ್ಳ ಪುರುಷನು ಆಲೋಚನೆ ಮಾಡಿದನು:[೧] ಯಾವನು ಉತ್ಕ್ರಮಿಸಿದರೆ[೨] ನಾನು ಉತ್ಕ್ರಮಿಸುವೆನು? ಯಾವನು (ಶರೀರ ದಲ್ಲಿ) ನಿಂತುಕೊಂಡರೆ ನಾನು ನಿಲ್ಲುವೆನು?

[[೧] ಸೃಷ್ಟಿಯ ಫಲಕ್ರಮ ಮುಂತಾದುವುಗಳ ಆಲೋಚನೆಯನ್ನು ಮಾಡಿದನು.
[೨] ಶರೀರದಿಂದ ಹೊರಗೆ ಬಂದರೆ.]

**ಸ ಪ್ರಾಣಮಸೃಜತ; ಪ್ರಾಣಾಚ್ಛ್ರದ್ಧಾಂ, ಖಂ ವಾಯು-ರ್ಜ್ಯೋತಿರಾಪಃ, ಪೃಥಿವೀಂದ್ರಿಯಂ, ಮನಃ, ಅನ್ನಮನ್ನಾ-ದ್ವೀರ್ಯಂ, ತಪೋ ಮಂತ್ರಾಃ, ಕರ್ಮ, ಲೋಕಾ, ಲೋಕೇಷು ಚ ನಾಮ ಚ ॥ ೪ ॥**

ಸಃ = ಆ ಪುರುಷನು ಪ್ರಾಣಂ = ಪ್ರಾಣನನ್ನು ಅಸೃಜತ = ಸೃಷ್ಟಿಸಿದನು, ಪ್ರಾಣಾತ್ = ಪ್ರಾಣನಿಂದ ಶ್ರದ್ಧಾಂ = ಶ್ರದ್ಧೆಯನ್ನೂ, ಖಂ = ಆಕಾಶ ವಾಯುಃ = ವಾಯು ಜ್ಯೋತಿಃ = ಜ್ಯೋತಿ ಆಪಃ = ನೀರು ಪೃಥಿವೀ = ಪೃಥ್ವಿ ಇಂದ್ರಿಯಂ = ಇಂದ್ರಿಯ ಮನಃ = ಮನಸ್ಸು ಅನ್ನಂ = ಅನ್ನ [ಇವುಗಳನ್ನೂ], ಅನ್ನಾತ್ = ಅನ್ನ ದಿಂದ ವೀರ್ಯಂ = ವೀರ್ಯ ತಪಃ = ತಪಸ್ಸು ಮಂತ್ರಾಃ = ಮಂತ್ರಗಳು ಕರ್ಮ = ಕರ್ಮ ಲೋಕಾಃ = ಲೋಕಗಳು [ಇವುಗಳನ್ನೂ] ಲೋಕೇಷು ಚ = ಮತ್ತು ಲೋಕಗಳಲ್ಲಿ ನಾಮ ಚ = ನಾಮವನ್ನೂ [ಸೃಷ್ಟಿಸಿದನು].

೪. ಆ ಪುರುಷನು ಪ್ರಾಣನನ್ನು[೧] ಸೃಷ್ಟಿಸಿದನು. ಪ್ರಾಣನಿಂದ ಶ್ರದ್ಧೆ[೨] ಆಕಾಶ ವಾಯು ಜ್ಯೋತಿ ನೀರು ಪೃಥ್ವಿ[೩] ಇಂದ್ರಿಯ ಮನಸ್ಸು ಅನ್ನ[೪] (ಇವುಗಳನ್ನೂ), ಅನ್ನದಿಂದ ವೀರ್ಯ[೫] ತಪಸ್ಸು[೬] ಮಂತ್ರಗಳು[೭] ಕರ್ಮ[೮] ಲೋಕಗಳು[೯] (ಇವುಗಳನ್ನೂ), ಮತ್ತು ಲೋಕಗಳಲ್ಲಿ ನಾಮವನ್ನೂ[೧೦] (ಸೃಷ್ಟಿಸಿದನು).

[[೧] ಸರ್ವಪ್ರಾಣಿಗಳ ಇಂದ್ರಿಯಗಳಿಗೆ ಆಧಾರನಾಗಿರುವ ಅಂತರಾತ್ಮನಾದ ಹಿರಣ್ಯ ಗರ್ಭನೆಂಬ ಪ್ರಾಣನನ್ನು
[೨] ಎಲ್ಲ ಪ್ರಾಣಿಗಳು ಶುಭಕರ್ಮದಲ್ಲಿ ಪ್ರವೃತ್ತರಾಗಲು
[೩] ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಪಂಚಭೂತಗಳ ಸೃಷ್ಟಿ

೪ ಪ್ರಾಣಿಗಳ ಜೀವನಕ್ಕಾಗಿ.
೫ ಕರ್ಮಪ್ರವೃತ್ತಿಗೆ ಸಾಧನವಾದ ಸಾಮರ್ಥ್ಯ.
೬ ಚಿತ್ತಶುದ್ಧಿಗಾಗಿ.
೭ ಕರ್ಮಕ್ಕೆ ಸಾಧನವಾದ ಋಕ್ಕು ಯಜುಸ್ಸು ಸಾಮ ಅಥರ್ವಾಂಗಿರಸ್ಸು ಎಂಬ ಮಂತ್ರಗಳನ್ನು.
೮ ಅಗ್ನಿಹೋತ್ರಾದಿ ಕರ್ಮಗಳು.
೯ ಕರ್ಮಗಳಿಗೆ ಫಲವಾದ
೧೦ ಸಮಸ್ತವಸ್ತುಗಳ ಹೆಸರುಗಳು ]

**ಸ ಯಥೇಮಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ । ಏವಮೇವಾಸ್ಯ ಪರಿದ್ರಷ್ಟು-ರಿಮಾಃ ಷೋಡಶ ಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ, ಭಿದ್ಯೇತೇ ಚಾಸಾಂ ನಾಮರೂಪೇ, ಪುರುಷ ಇತ್ಯೇವಂ ಪ್ರೋಚ್ಯತೇ; ಸ ಏಷೋಽಕಲೋಽಮೃತೋ ಭವತಿ; ತದೇಷ ಶ್ಲೋಕಃ ॥ ೫ ॥**

**ಸಃ** = ಆ ದೃಷ್ಟಾಂತ: **ಯಥಾ** = ಹೇಗೆ **ಇಮಾಃ** = ಈ **ಸಮುದ್ರಾಯಣಾಃ ಸ್ಯಂದಮಾನಾಃ** = ಸಮುದ್ರಾಭಿಮುಖವಾಗಿ ಹರಿಯುತ್ತಿರುವ **ನದ್ಯಃ** = ನದಿಗಳು **ಸಮುದ್ರಂ ಪ್ರಾಪ್ಯ** = ಸಮುದ್ರವನ್ನು ಸೇರಿ **ಅಸ್ತಂ ಗಚ್ಛಂತಿ** = ಅದೃಶ್ಯವಾಗುವುವೊ, **ತಾಸಾಂ** = ಅವುಗಳ **ನಾಮರೂಪೇ ಭಿದ್ಯೇತೇ** = ನಾಮರೂಪಗಳು ನಾಶವಾಗುವುವೊ, **ಸಮುದ್ರಃ ಇತಿ ಏವಂ** = ಸಮುದ್ರವೆಂದೇ **ಪ್ರೋಚ್ಯತೇ** = ಹೇಳಲ್ಪಡುವುದೊ **ಏವಂ ಏವ** = ಹೀಗೆಯೇ **ಅಸ್ಯ ಪರಿದ್ರಷ್ಟುಃ** = ಈ ಸರ್ವಸಾಕ್ಷಿಯ **ಇಮಾಃ ಪುರುಷಾಯಣಾಃ** = ಈ ಪುರುಷನನ್ನೇ ಹೊಂದಬೇಕಾಗಿರುವ **ಷೋಡಶ ಕಲಾಃ** = ಹದಿನಾರು ಕಲೆಗಳು **ಪುರುಷಂ ಪ್ರಾಪ್ಯ** = ಪುರುಷನನ್ನು ಹೊಂದಿ **ಅಸ್ತಂ ಗಚ್ಛಂತಿ** = ವಿಲೀನವಾಗುವುವು **ಚ** = ಮತ್ತು **ಆಸಾಂ** = ಇವುಗಳ **ನಾಮರೂಪೇ** = ನಾಮರೂಪಗಳು **ಭಿದ್ಯೇತೇ** = ನಾಶವಾಗುವುವು, **ಪುರುಷಃ ಇತಿ ಏವಂ** = ಪುರುಷನೆಂದೇ **ಪ್ರೋಚ್ಯತೇ** = ಹೇಳಲ್ಪಡುತ್ತದೆ. **ಸಃ ಏಷಃ** = ಆ ಇವನು **ಅಕಲಃ** = ಕಲಾಶೂನ್ಯನೂ **ಅಮೃತಃ** = ಅಮೃತನೂ **ಭವತಿ** = ಆಗುತ್ತಾನೆ **ತತ್** = ಈ ವಿಷಯದಲ್ಲಿ **ಏಷಃ ಶ್ಲೋಕಃ** = ಈ ಮಂತ್ರವಿದೆ.

**೫.** ಈ ವಿಷಯದಲ್ಲಿ ಈ ದೃಷ್ಟಾಂತವಿದೆ: ಸಮುದ್ರಾಭಿಮುಖವಾಗಿ ಹರಿಯುತ್ತಿರುವ ನದಿಗಳು ಸಮುದ್ರವನ್ನು ನೇರಿ ಹೇಗೆ ಅದೃಶ್ಯವಾಗುವುವೊ,

ಅವುಗಳ ನಾಮರೂಪಗಳು[೧] (ಹೇಗೆ) ನಾಶವಾಗುವುವೊ ಮತ್ತು (ಅವು) ಸಮುದ್ರವೆಂದೇ (ಹೇಗೆ) ಹೇಳಲ್ಪಡುವುವೊ, ಹಾಗೆಯೇ ಈ ಸರ್ವಸಾಕ್ಷಿಯ[೨] ಪುರುಷನನ್ನೇ ಹೊಂದಬೇಕಾಗಿರುವ ಈ ಹದಿನಾರು ಕಲೆಗಳು ಪುರುಷನನ್ನು ಹೊಂದಿ ವಿಲೀನವಾಗುವುವು, ಇವುಗಳ ನಾಮರೂಪಗಳು ನಾಶವಾಗುವುವು ಮತ್ತು (ಇದೆಲ್ಲವೂ) ಪುರುಷನೆಂದೇ[೩] ಹೇಳಲ್ಪಡುತ್ತದೆ. ಆ ಇವನು ಕಲಾ ಶೂನ್ಯನೂ ಅಮೃತನೂ[೪] ಆಗುತ್ತಾನೆ. ಈ ವಿಷಯದಲ್ಲಿ ಈ ಮಂತ್ರವಿದೆ:

[[೧] ಗಂಗೆ ಯಮುನೆ ಎಂಬ.

[೨] ಸೂರ್ಯನು ತನ್ನ ಸ್ವರೂಪವಾದ ಪ್ರಕಾಶಕ್ಕೆ ಹೇಗೆ ಕರ್ತೃವೊ ಹಾಗೆಯೇ ಆತ್ಮನು ತನ್ನ ಸ್ವರೂಪವಾದ ಜ್ಞಾನಕ್ಕೆ ಕರ್ತೃವು.

[೩] ನಾಮರೂಪಗಳು ನಾಶವಾದ ಮೇಲೆ ಅವಿನಾಶಿಯಾಗಿ ಉಳಿಯುವ ತತ್ತ್ವವನ್ನೇ ಪುರುಷನು ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ.

[೪] ಅವಿದ್ಯಾಕೃತವಾದ ಕಲೆಗಳಿಂದಲೇ ಮೃತ್ಯುವುಂಟಾಗುವುದು. ಆದುದರಿಂದ ಕಲೆಗಳು ನಾಶವಾಗಲಾಗಿ ಅಮೃತನಾಗುತ್ತಾನೆ.]

**ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ ।**
**ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥ ೬ ॥**

**ರಥನಾಭೌ** = ರಥಚಕ್ರದ ಗುಂಬದಲ್ಲಿ **ಅರಾಃ ಇವ** = ಆರೆಯ ಕಾಲುಗಳಂತೆ **ಯಸ್ಮಿನ್** = ಯಾವನಲ್ಲಿ **ಕಲಾಃ** = ಕಲೆಗಳು **ಪ್ರತಿಷ್ಠಿತಾಃ** = ಪ್ರತಿಷ್ಠಿತವಾಗಿರುವುವೊ, **ತಂ** = ಆ **ವೇದ್ಯಂ** = ವೇದ್ಯನಾದ **ಪುರುಷಂ** = ಪುರುಷನನ್ನು **ವೇದ** [ಜಾನೀಯಾತ್]= ತಿಳಿದುಕೊಳ್ಳಬೇಕು, **ಯಥಾ** = ಹೇಗೆ **ಮೃತ್ಯುಃ** = ಮೃತ್ಯುವು **ವಃ** = ನಿಮ್ಮನ್ನು **ಮಾ ಪರಿವ್ಯಥಾಃ** = ವ್ಯಥೆಗೊಳಿಸದಿರುವುದೊ **ಇತಿ** = ಎಂದು.

೬. ರಥಚಕ್ರದ ಗುಂಬದಲ್ಲಿ (ಸೇರಿರುವ) ಆರೆಯ ಕಾಲುಗಳಂತೆ ಯಾವನಲ್ಲಿ ಕಲೆಗಳು ಪ್ರತಿಷ್ಠಿತವಾಗಿರುವುವೊ[೧] ವೇದ್ಯನಾದ ಆ ಪುರುಷನನ್ನು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಂಡರೆ ಮೃತ್ಯುವು ನಿಮ್ಮನ್ನು ವ್ಯಥೆಗೊಳಿಸುವುದಿಲ್ಲ.

[[೧] ಉತ್ಪತ್ತಿಸ್ಥಿತಿಲಯಗಳ ಕಾಲದಲ್ಲಿ.]

**ತಾನ್ ಹೋವಾಚೈತಾವದೇವಾಹಮೇತತ್ ಪರಂ ಬ್ರಹ್ಮ ವೇದ । ನಾತಃ ಪರಮಸ್ತೀತಿ ॥ ೭ ॥**

[ಪಿಪ್ಪಲಾದಃ = ಪಿಪ್ಪಲಾದನು] ತಾನ್ = ಅವರನ್ನು ಕುರಿತು ಉವಾಚ ಹ= ಹೇಳಿದನು ಅಹಂ = ನಾನು ಏತಾವತ್ ಏವ = ಇಷ್ಟೇ ಏತತ್ = ಈ ಪರಂ ಬ್ರಹ್ಮ= ಪರಬ್ರಹ್ಮವನ್ನು ವೇದ = ತಿಳಿದಿರುವೆನು; ಅತಃ ಪರಂ = ಇದಕ್ಕಿಂತ ಶ್ರೇಷ್ಠ ವಾದುದು ನ ಅಸ್ತಿ= ಇಲ್ಲ ಇತಿ = ಎಂದು.

೭. ಪಿಪ್ಪಲಾದನು ಅವರಿಗೆ ಹೇಳಿದನು: ಈ ಪರಬ್ರಹ್ಮವನ್ನು ನಾನು ಇಷ್ಟೇ ಅರಿತಿರುವೆನು; ಈ ಪರಬ್ರಹ್ಮಕ್ಕಿಂತ ಶ್ರೇಷ್ಠವಾದುದು (ಯಾವುದೂ) ಇಲ್ಲ.

**ತೇ ತಮರ್ಚಯಂತಸ್ತ್ವಂ ಹಿ ನಃ ಪಿತಾ ಯೋಽಸ್ಮಾ-ಕಮವಿದ್ಯಾಯಾಃ ಪರಂ ಪಾರಂ ತಾರಯಸೀತಿ । ನಮಃ ಪರಮ-ಋಷಿಭ್ಯೋ ನಮಃ ಪರಮಋಷಿಭ್ಯಃ ॥ ೮ ॥**

ತೇ = ಅವರು [ಶಿಷ್ಯರು] ತಂ = ಅವನನ್ನು ಅರ್ಚಯಂತಃ = ಅರ್ಚಿಸುವವ ರಾಗಿ [ಊಚುಃ = ಹೇಳಿದರು] ತ್ವಂ ಹಿ = ನೀನೇ ನಃ=ನಮ್ಮ ಪಿತಾ = ತಂದೆಯು, ಯಃ [ತ್ವಂ] = ಯಾವ ನೀನು ಅಸ್ಮಾಕಂ = ನಮ್ಮ ಅವಿದ್ಯಾಯಾಃ = ಅವಿದ್ಯೆಯಿಂದ ಪರಂ ಪಾರಂ = ಆಚೆಯ ದಡವನ್ನು ತಾರಯಸಿ = ದಾಟಿಸುತ್ತೀಯೆ. ಪರಮ-ಋಷಿಭ್ಯಃ ನಮಃ = ಪರಮಋಷಿಗಳಿಗೆ ನಮಸ್ಕಾರ, ಪರಮಋಷಿಭ್ಯಃ ನಮಃ.

೮. (ಅನಂತರ ಗುರುವಿನಿಂದ ಉಪದೇಶಿಸಲ್ಪಟ್ಟ) ಆ ಶಿಷ್ಯರು ಅವನನ್ನು ಪೂಜಿಸಿ ಹೇಳಿದರು: ನಮ್ಮ ಅವಿದ್ಯೆಯೆಂಬ (ಮಹೋದಧಿ ಯಿಂದ)[೧] ಆಚೆಯ ದಡಕ್ಕೆ[೨] ದಾಟಿಸುವ[೩] ನೀನೇ ನಮ್ಮ ತಂದೆ.[೪]

ಪರಮ ಋಷಿಗಳಿಗೆ ನಮಸ್ಕಾರ.
ಪರಮ ಋಷಿಗಳಿಗೆ ನಮಸ್ಕಾರ.

[೧ ಜನ್ಮ ಮುಪ್ಪು ಮರಣ ರೋಗ ದುಃಖ ಇವೇ ಮೊದಲಾದ ಮೊಸಳೆಗಳಿಂದ ತುಂಬಿರುವ ಅಪಾರವಾದ ಅವಿದ್ಯಾಸಾಗರ.

೨ ಮೋಕ್ಷವೆಂಬ

೩ ಬ್ರಹ್ಮವಿದ್ಯೆಯೆಂಬ ನೌಕೆಯ ಮೂಲಕ.

೪ ಶರೀರೋತ್ಪತ್ತಿಗೆ ಕಾರಣನಾದ ತಂದೆಯು ಲೋಕದಲ್ಲಿ ಪೂಜ್ಯತಮನಾಗಿರುವಾಗ ಆತ್ಯಂತಿಕ ಅಭಯವನ್ನು ಕೊಟ್ಟಿರುವ ಮತ್ತು ಬ್ರಹ್ಮಶರೀರವನ್ನು ವಿದ್ಯೆಯಿಂದ ಉತ್ಪತ್ತಿಮಾಡುವ ಗುರುವಿನ ವಿಷಯವಾಗಿ ಹೇಳಬೇಕಾದದ್ದು ಏನೂ ಇಲ್ಲ, ಅವನು ತಂದೆಗಿಂತಲೂ ಪೂಜ್ಯತಮನು ]

# ಶ್ರೀರಂಗರಾಮಾನುಜರ ವ್ಯಾಖ್ಯಾನವನ್ನು ಅನುಸರಿಸಿದ

# ತಾತ್ಪರ್ಯಟಿಪ್ಪಣಿಗಳು

ಅತಸೀಗುಚ್ಛಸಚ್ಛಾಯಮಂಚಿತೋರಸ್ಥಲಂ ಶ್ರಿಯಾ ।
ಅಂಜನಾಚಲಶೃಂಗಾರಮಂಜಲಿರ್ಮಮ ಗಾಹತಾಮ್ ॥

ವ್ಯಾಸಂ ಲಕ್ಷ್ಮಣಯೋಗೀಂದ್ರಂ ಪ್ರಣಮ್ಯಾನ್ಯಾನ್ ಗುರೂನಪಿ ।
ಕ್ರಮಾತ್ ಪ್ರಶ್ನೋಪನಿಷದಂ ವ್ಯಾಕರಿಷ್ಯೇ ಯಥಾಮತಿ ॥

# ಪ್ರಶ್ನೋಪನಿಷತ್

## ಮೊದಲನೆಯ ಪ್ರಶ್ನೆ

೧. ಭರದ್ವಾಜನ ಮಗನಾದ ಸುಕೇಶ, ಶಿಬಿಯ ಮಗನಾದ ಸತ್ಯಕಾಮ, ಗರ್ಗಗೋತ್ರದ ಸೌರ್ಯಾಯಣಿ, ಅಶ್ವಲನ ಮಗನಾದ ಕೌಸಲ್ಯ, ವಿದರ್ಭನ ಮಗನಾದ ಭಾರ್ಗವ, ಮತ್ತು ಕಾತ್ಯಾಯನ ಗೋತ್ರದ ಕಬಂಧಿ— ಇವರು ಬ್ರಹ್ಮಪರರೂ[೧] ಬ್ರಹ್ಮನಿಷ್ಠರೂ[೨] ಆಗಿದ್ದರು. ಇವರು ಪರಬ್ರಹ್ಮವನ್ನು[೩] ಅನ್ವೇಷಿಸುವವರಾಗಿ, 'ಇವನೇ ನಿಶ್ಚಯವಾಗಿ ಅದೆಲ್ಲವನ್ನೂ ಹೇಳುವನು' ಎಂದು (ಯೋಚಿಸಿ) ಭಗವಂತನಾದ ಪಿಪ್ಪಲಾದನ ಬಳಿಗೆ ಬಂದರು.

[[೧] ವೇದವನ್ನೇ ಶರಣುಹೊಂದಿದವರು ಅಥವಾ ಬ್ರಹ್ಮಜ್ಞಾನತತ್ಪರರು

[೨] ವೇದದ ಅರ್ಥದಲ್ಲಿ ಶ್ರದ್ಧೆಯುಳ್ಳವರು ಅಥವಾ ತಪೋನಿಷ್ಠರು; ಏಕೆಂದರೆ ಬ್ರಹ್ಮಶಬ್ದಕ್ಕೆ ವೇದ ತತ್ತ್ವ ತಪಸ್ಸು ಎಂಬ ಅರ್ಥಗಳಿವೆ.

[೩] ಸ್ವರೂಪದಿಂದಲೂ ಗುಣದಿಂದಲೂ ಬೃಹತ್ತಾಗಿರುವುದು ಬ್ರಹ್ಮ.]

೨. ಆ ಋಷಿಯು ಅವರಿಗೆ ಹೇಳಿದನು: 'ಒಂದು ವರ್ಷ ಇನ್ನೂ ಹೆಚ್ಚಿನ ತಪಸ್ಸಿನಿಂದಲೂ[೧] ಬ್ರಹ್ಮಚರ್ಯದಿಂದಲೂ[೨] ಶ್ರದ್ಧೆಯಿಂದಲೂ[೩] ಇಲ್ಲಿ ವಾಸಮಾಡಿರಿ; (ಅನಂತರ) ಇಚ್ಛಾನುಸಾರ ಪ್ರಶ್ನಿಸಿರಿ; ನಮಗೆ ತಿಳಿದಿದ್ದರೆ ಎಲ್ಲವನ್ನೂ ನಿಮಗೆ ಹೇಳುವೆವು.'[೪]

[[೧] ಮೊದಲೇ ತಪಸ್ಸು ಬ್ರಹಚರ್ಯ ಇವೇ ಮೊದಲಾದುವುಗಳನ್ನು ಅಭ್ಯಾಸ ಮಾಡಿದ್ದರೂ ಬ್ರಹ್ಮವಿದ್ಯಾಪ್ರಾಪ್ತಿಗಾಗಿ ಶರೀರಶೋಷಣಾದಿರೂಪವಾದ ತಪಸ್ಸನ್ನು ಮಾಡಬೇಕು ಎಂದರ್ಥ

[೨] ಮೈಥುನವು ಅಷ್ಟವಿಧ: ಸ್ತ್ರೀಯರ ಸ್ಮರಣೆ, ಅವರ ಕೀರ್ತನೆ, ಅವರೊಂದಿಗೆ ಆಟ, ಅವರನ್ನು ನೋಡುವುದು, ಅವರೊಂದಿಗೆ ಗುಹ್ಯಭಾಷಣ, ಅವರ ವಿಷಯವಾಗಿ ಸಂಕಲ್ಪ, ಅಧ್ಯವಸಾಯ ಮತ್ತು ಅವರೊಂದಿಗೆ ಕ್ರಿಯೆ; ಇವುಗಳನ್ನು ಸಂಪೂರ್ಣವಾಗಿ ತ್ಯಾಗಮಾಡುವುದು ಬ್ರಹ್ಮಚರ್ಯ.

[೩] ಆಸ್ತಿಕ್ಯಬುದ್ಧಿಯಿಂದಲೂ.

[೪] ಇಲ್ಲಿ ಎರಡು ಸೂಚನೆಗಳಿವೆ: (೧) ಗುರುವಿನ ಜ್ಞಾನವನ್ನು ಪರೀಕ್ಷೆಮಾಡದೆ ಅವನು ಉಪದೇಶಮಾಡಿದ್ದನ್ನು ಕೇಳಬೇಕು; (೨) ಶಿಷ್ಯಸಂಗ್ರಹದಲ್ಲಿ ಗುರುವು ಹೆಚ್ಚು ಆದರವನ್ನು ತೋರಿಸಕೂಡದು.]

೩. ಅನಂತರ ಕಾತ್ಯಾಯನ ಗೋತ್ರದ ಕಬಂಧಿಯು ಆಚಾರ್ಯನ ಸಮೀಪಕ್ಕೆ ಬಂದು ಕೇಳಿದನು: ಹೇ ಭಗವಂತನೆ, ಈ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?

೪. ಪಿಪ್ಪಲಾದನು ಅವನಿಗೆ ಹೇಳಿದನು: ಆ ಪ್ರಜಾಪತಿಯು[೧] ಪ್ರಜಾಕಾಮನಾಗಿ ತಪಸ್ಸುಮಾಡಿದನು; ಅವನು ತಪಸ್ಸುಮಾಡಿದ ಮೇಲೆ, 'ಇವು ನನಗೆ ಬಹುವಾಗಿ ಪ್ರಜೆಗಳನ್ನು ಉಂಟುಮಾಡುವುವು' ಎಂದು ಯೋಚಿಸಿ, ರಯಿ, ಪ್ರಾಣ ಎಂಬ ಜೋಡಿಯನ್ನು ಸೃಷ್ಟಿಸುತ್ತಾನೆ.[೨]

[[೧] ಇಲ್ಲಿ ಶ್ರುತಿಯು ಜಗತ್ಕಾರಣವನ್ನು ಹೇಳುವುದರಿಂದ ಪ್ರಜಾಪತಿಶಬ್ದವು ಬ್ರಹ್ಮಪರವಾದದ್ದು.
[೨] ಸೃಷ್ಟಿಸಿದನು.]

೫. ಆದಿತ್ಯನೇ[೧] ಪ್ರಾಣ, ಚಂದ್ರನೇ ರಯಿ; ಮೂರ್ತಾಮೂರ್ತಗಳೆಲ್ಲವೂ[೨] ರಯಿ; ಆದುದರಿಂದ ಮೂರ್ತಿಯೇ ರಯಿ.[೩]

[[೧] ಭೋಗ್ಯವಸ್ತುವನ್ನು ಸ್ವೀಕರಿಸುವನಾದ್ದರಿಂದ (ಆದತ್ತೇ) ಆದಿತ್ಯನು ಎಂದರೆ ಭೋಕ್ತೃ.
[೨] ಮೂರ್ತವೆಂದರೆ ಪೃಥ್ವಿ ನೀರು ತೇಜಸ್ಸು; ಅಮೂರ್ತವೆಂದರೆ ವಾಯು ಮತ್ತು ಅಂತರಿಕ್ಷ ಈ ಭೂತಸಮೂಹಗಳಿಗೆ ರಯಿ, ಅನ್ನ ಅಥವಾ ಭೋಗ್ಯ ಎಂದು ಹೆಸರು.
[೩] ಪಾಂಚಭೌತಿಕವಾದ ಶರೀರವೆಲ್ಲ ಭೋಗ್ಯ ಎಂದರ್ಥ.]

೬. ಈಗ[೧] ಆದಿತ್ಯನು ಉದಯಿಸುತ್ತ ಪೂರ್ವದಿಕ್ಕನ್ನು ಯಾವಾಗ ಪ್ರವೇಶಿಸುವನೊ ಆಗ ಅದರಿಂದ ಪೂರ್ವದಲ್ಲಿರುವ ಪ್ರಾಣಗಳನ್ನು ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ;[೨] ಯಾವಾಗ ಪಶ್ಚಿಮೋತ್ತರದಕ್ಷಿಣಗಳನ್ನು, ಯಾವಾಗ ಕೆಳಗಡೆಯನ್ನು ಮೇಲ್ಗಡೆಯನ್ನು, ಯಾವಾಗ ಅಂತರದಿಕ್ಕುಗಳನ್ನು, ಯಾವಾಗ ಎಲ್ಲವನ್ನೂ ಪ್ರಕಾಶಿಸುವನೊ ಆಗ ಅದರಿಂದ ಸರ್ವಪ್ರಾಣಗಳನ್ನು ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.

[[೧] ರಯಿಯ ನಿರೂಪಣೆಯಾದ ಮೇಲೆ ಆದಿತ್ಯನನ್ನು ವರ್ಣಿಸಿದೆ. ಆದಿತ್ಯಶಬ್ದದಿಂದ ಹೇಳಲ್ಪಟ್ಟ ಭೋಕ್ತೃವು ಪ್ರಾಣನೆಂದು ಕರೆಯಲ್ಪಡಲು ಕಾರಣವನ್ನು ಈ ಮಂತ್ರದಲ್ಲಿ ಹೇಳಿರುತ್ತದೆ.

[2] ಇಲ್ಲಿ ಆದಿತ್ಯನೆಂದರೆ ಜೀವ. ಜೀವಾತ್ಮನು ಸುಷುಪ್ತಿಯಿಂದ ಎಚ್ಚರಗೊಂಡು ಎಲ್ಲ ದಿಕ್ಕುಗಳನ್ನೂ ಪ್ರಕಾಶಿಸುತ್ತ ಆಯಾ ದಿಕ್ಕುಗಳಲ್ಲಿರುವ ಇಂದ್ರಿಯಗಳನ್ನು ತನ್ನ ರಶ್ಮಿಗಳಾದ ಧರ್ಮಭೂತಜ್ಞಾನದ ಮೂಲಕ ಧರಿಸುತ್ತಾನೆ. ಪ್ರಾಣಶಬ್ದದಿಂದ ಹೇಳಲ್ಪಟ್ಟ ಇಂದ್ರಿಯಗಳನ್ನು ಜೀವಾತ್ಮನು ನಿಯಮನಮಾಡುವುದರಿಂದ ಇವನಿಗೂ ಪ್ರಾಣನೆಂದೇ ಹೆಸರು. ಧರ್ಮಭೂತಜ್ಞಾನದ ಮೂಲಕ ಇಂದ್ರಿಯಗಳನ್ನು ನಿಯಮನಮಾಡುವ ಅಧಿಷ್ಠಾತೃವು ಇಲ್ಲದಿದ್ದರೆ ರೂಪಾದಿಗಳ ಗ್ರಹಣವೇ ಆಗುತ್ತಿರಲಿಲ್ಲ; ಏಕೆಂದರೆ ಚೇತನಾತ್ಮಕವಾದ ಜೀವವಿಲ್ಲದಿದ್ದರೆ ಕರಣಗಳಿಗೆ ಕಾರ್ಯತ್ವವು ಉಂಟಾಗುವುದಿಲ್ಲ.]

೭. ವಿಶ್ವರೂಪನೂ[1] ಪ್ರಾಣನೂ ಅಗ್ನಿಯೂ[2] ಆದ ಆ[3] ಈ ವೈಶ್ವಾನರನೇ ಉದಯಿಸುತ್ತಾನೆ. ಆ ಇದು ಋಕ್ಕಿನಿಂದ ಹೇಳಲ್ಪಟ್ಟಿದೆ.

['ಆದಿತ್ಯೋ ಹ ವೈ ಪ್ರಾಣಃ' (೧, ೫) ಎಂಬಲ್ಲಿ ಪ್ರಾಣಶಬ್ದದಿಂದ ಹೇಳಲ್ಪಟ್ಟಿರುವ ಮತ್ತು ಉದಯಿಸುತ್ತಿರುವ ಭೋಕ್ತೃವರ್ಗವು ಪರಮಾತ್ಮನನ್ನೇ ಆತ್ಮನನ್ನಾಗಿ ಹೊಂದಿದೆ ಎಂದು ಆಚಾರ್ಯನು ಉಪದೇಶಿಸುತ್ತಾನೆ. ಭಗವದ್ಭಾಷ್ಯಕಾರರು ವೈಶ್ವಾನರಾಧಿಕರಣದಲ್ಲಿ ಈ ಮಂತ್ರವು ಪರಮಾತ್ಮಪರವೆಂದು ಹೇಳಿರುತ್ತಾರೆ.

[1] ಸರ್ವವನ್ನೂ ಶರೀರವಾಗಿ ಉಳ್ಳವನಾದ್ದರಿಂದ ವಿಶ್ವರೂಪನು.

[2] ನೇತೃತ್ವಾದಿ ಗುಣಗಳನ್ನು ಹೊಂದಿರುವುದರಿಂದ.

[3] ಹಿಂದೆ ಪ್ರಜಾಪತಿನಿರ್ದಿಷ್ಟನಾದ ಪರಮಾತ್ಮ.]

೮. ವಿಶ್ವರೂಪನೂ ಜಾತವೇದನೂ[1] ಪರಾಯಣನೂ[2] ಜ್ಯೋತಿಯೂ[3] ಅದ್ವಿತೀಯನೂ ತಪಿಸುತ್ತಿರುವವನೂ[4] ಆದ ಹರಿಯನ್ನು[5] ಅನುಸರಿಸುವವನೂ ಪ್ರಜೆಗಳ ಪ್ರಾಣನೂ[6] ಸಹಸ್ರರಶ್ಮಿಗಳುಳ್ಳವನೂ[7] ಆದ ಈ ಸೂರ್ಯನು[8] ನೂರು ಬಗೆಯಿಂದ್ ಉದಯಿಸುತ್ತಾನೆ.೧೦

[[1] ಯಾವನಿಂದ ವೇದಗಳು ಹುಟ್ಟಿವೆಯೊ ಅವನು ಜಾತವೇದ ಎಂದರೆ ಸರ್ವಜ್ಞಾನಗಳ ಉತ್ಪಾದಕನು.

[2] ಪರಮಪ್ರಾಪ್ಯನು.

[3] ಸರ್ವವನ್ನೂ ಪ್ರಕಾಶಿಸುವ ದೀಪ್ತಿಯುಳ್ಳವನು.

[4] ಜಾಠರಾಗ್ನಿರೂಪದಿಂದ.

[5] ವಿಷ್ಣುವನ್ನು; ಹರಿಶಬ್ದದ 'ನಾಂತತ್ವ' ಛಾಂದಸ.

[6] ಧಾರಕನು.

[7] ನಾನಾ ಬಗೆಯ ವಸ್ತುಗಳ ಜ್ಞಾನವನ್ನು ಹೊಂದಿರುವವನು.

[8] ಸೂರ್ಯನಂತೆ ಪ್ರಕಾಶಿಸುವ ಜೀವಾತ್ಮನು.

[೯] ದೇವ ಮನುಷ್ಯ ಇವೇ ಮೊದಲಾದ ಅನೇಕ ಬಗೆಯ ದೇಹಗಳಲ್ಲಿ ಅಹಂಕಾರವನ್ನು ಹೊಂದಿ.

[೧೦] ಸೃಷ್ಟಿಕಾಲದಲ್ಲಿ.]

೯. ಸಂವತ್ಸರವೇ ಪ್ರಜಾಪತಿಯು. ಅದಕ್ಕೆ ದಕ್ಷಿಣವೆಂಬ ಮತ್ತು ಉತ್ತರವೆಂಬ ಎರಡು ಅಯನಗಳಿವೆ. ಯಾರು ಇಷ್ಟಾಪೂರ್ತಗಳನ್ನೂ[೧] ದಾನವನ್ನೂ[೨] ಮಾಡುವರೊ ಅವರು ಚಂದ್ರಲೋಕವನ್ನೇ ಹೊಂದುತ್ತಾರೆ; ಅವರೇ ಪುನಃ ಹಿಂತಿರುಗುತ್ತಾರೆ[೩] ಆದ್ದರಿಂದ ಪ್ರಜಾಕಾಮರಾದ ಈ ಋಷಿಗಳು[೪] ದಕ್ಷಿಣಮಾರ್ಗವನ್ನು[೫] ಆರಿಸಿಕೊಳ್ಳುತ್ತಾರೆ. ಯಾವುದು ಪಿತೃಯಾನವೊ ಅದೇ ಈ ರಯಿ.[೬]

[ರಯಿಯೇ ಪ್ರಕೃತಿರೂಪವಾದ ಭೋಗ್ಯ, ಪ್ರಾಣನೇ ಪುರುಷರೂಪನಾದ ಭೋಕ್ತೃ; ಸೂಕ್ಷ್ಮಪ್ರಕೃತಿಜೀವರನ್ನು ಶರೀರವಾಗಿ ಹೊಂದಿರುವ ಪ್ರಜಾಪತಿಯ ವಿಭಾಗವನ್ನು ವರ್ಣಿಸಿ ಪಿಪ್ಪಲಾದನು ಶಿಷ್ಯರ ಅವಧಾರಣೆ ಅಥವಾ ಉಪಾಸನೆಗಾಗಿ ಅಖಂಡಕಾಲರೂಪದಿಂದ ಸ್ಥಿತನಾದ ಪರಮಾತ್ಮನ ಖಂಡಕಾಲದ ವಿಭಾಗವನ್ನು ತೋರಿಸಲು ಈ ಮೂರು ಭಾಗಗಳನ್ನು ಉಪದೇಶಿಸುತ್ತಾನೆ (೧) ಸಂವತ್ಸರವೆಂಬ ಹೆಸರುಳ್ಳ ಪ್ರಜಾಪತಿಯ ದಕ್ಷಿಣೋತ್ತರಾಯಣರೂಪವಾದ ರಯಿಪ್ರಾಣವೆಂಬ ವಿಭಾಗ, (೨) ಮಾಸವೆಂಬ ಹೆಸರುಳ್ಳ ಪ್ರಜಾಪತಿಯ ರಯಿಪ್ರಾಣಶಬ್ದಿತವಾದ ಶುಕ್ಲಕೃಷ್ಣಪಕ್ಷವೆಂಬ ವಿಭಾಗ, (೩) ಅಹೋರಾತ್ರಿಗಳೆಂಬ ಹೆಸರುಳ್ಳ ಪ್ರಜಾಪತಿಯ ರಯಿಪ್ರಾಣರೂಪವಾದ ಹಗಲುರಾತ್ರಿಗಳೆಂಬ ವಿಭಾಗ. ಈ ಸಂದರ್ಭದಲ್ಲಿ ರಯಿಶಬ್ದಿತವಾದ ದಕ್ಷಿಣಾಯನ-ಕೃಷ್ಣಪಕ್ಷ-ರಾತ್ರಿಗಳಿಗಿಂತ ಪ್ರಾಣಶಬ್ದದಿಂದ ಹೇಳಲ್ಪಟ್ಟ ಉತ್ತರಾಯಣ-ಶುಕ್ಲಪಕ್ಷ-ದಿವಸಗಳು ಉತ್ತಮವೆಂದು ಆಚಾರ್ಯನು ಹೇಳುತ್ತಾನೆ.

[೧] ಯಾಗಾದಿ ಶ್ರೌತಕರ್ಮಗಳು ಇಷ್ಟ, ತಟಾಕಾದಿಗಳ ನಿರ್ಮಾಣ ಪೂರ್ತ.

[೨] ಇಲ್ಲಿ ಕೃತಶಬ್ದವು ದಾನ ಅಥವಾ ದತ್ತ ಎಂಬ ಅರ್ಥವನ್ನು ಸೂಚಿಸುತ್ತದೆ. 'ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಎಂಬ ಮಂತ್ರದಲ್ಲಿ (ಛಾ. ಉ. ೫, ೧೦, ೩) ಇದೇ ಅರ್ಥವುಂಟು.

[೩] ಉತ್ತರಮಾರ್ಗದಿಂದ ಹೋದ ಆತ್ಮೋಪಾಸಕರು ಹಿಂತಿರುಗುವುದಿಲ್ಲ.

[೪] ಕ್ಷುದ್ರಫಲ-ದ್ರಷ್ಟೃಗಳು

[೫] 'ಧೂಮೋ ರಾತ್ರಿಸ್ತಥಾ ಕೃಷ್ಣಃ' (ಗೀತಾ, ೮, ೨೫) ಎಂಬಲ್ಲಿಯೂ ಮತ್ತು ಪುರಾಣಗಳಲ್ಲಿಯೂ ದಕ್ಷಿಣಾಯನವೆಂದು ಹೇಳಲ್ಪಟ್ಟ ಪಿತೃಯಾನವು ಬೇರೆ, ಮತ್ತು ಸಂವತ್ಸರದ ಅವಯವವಾದ, ಷಣ್ಮಾಸಗಳನ್ನು ಒಳಗೊಂಡಿರುವ, ದಕ್ಷಿಣಾಯನವೆಂದು ಹೇಳಲ್ಪಟ್ಟ ಪಿತೃಯಾನವು ಬೇರೆ. ಹೀಗಿದ್ದರೂ ಕಾಲಮಾರ್ಗಗಳು ಒಂದೇ

ಆಗಿರುವುದರಿಂದ ಎರಡಕ್ಕೂ ದಕ್ಷಿಣಾಯನವೆಂಬ ಶಬ್ದವನ್ನೇ ಉಪಯೋಗಿಸಿದೆ.
೬ ಅನ್ನ ಎಂದರೆ ವಿಷಯಭೋಗಗಳು.]

೧೦. ಈಗ[೧] ತಪಸ್ಸಿನಿಂದಲೂ[೨] ಬ್ರಹ್ಮಚರ್ಯದಿಂದಲೂ[೩] ಶ್ರದ್ಧೆಯಿಂದಲೂ[೪] ವಿದ್ಯೆಯಿಂದಲೂ[೫] ಆತ್ಮನನ್ನು[೬] ಅನ್ವೇಷಿಸಿ[೭] ಉತ್ತರಮಾರ್ಗದಿಂದ[೮] ಆದಿತ್ಯನನ್ನು[೯] ಹೊಂದುತ್ತಾರೆ; ಇದೇ ಪ್ರಾಣಗಳಿಗೆ[೧೦] ಆಶ್ರಯವು.[೧೧] ಇದು ಅಮೃತ ಮತ್ತು ಅಭಯ; ಇದು ಪರಾಯಣ.[೧೨] ಇದರಿಂದ (ಜೀವಾತ್ಮರು)[೧೩] ಹಿಂತಿರುಗುವುದಿಲ್ಲ. ಇವನು[೧೪] ತಡೆ.[೧೫] ಆ ವಿಷಯದಲ್ಲಿ[೧೬] ಈ ಮಂತ್ರವುಂಟು.

[೧ ಇದು ಮುಂದೆ ಪ್ರಾರಂಭಿಸಲ್ಪಡುವ ಹೊಸ ವಿಷಯವನ್ನು ಸೂಚಿಸುತ್ತದೆ.
೨ ಕಾಯಕ್ಲೇಶಾದಿರೂಪವಾದ ತಪಸ್ಸಿನಿಂದ.
೩ ಸ್ತ್ರೀಸಂಗರಾಹಿತ್ಯರೂಪವಾದ ಬ್ರಹ್ಮಚರ್ಯದಿಂದ.
೪ ಆಸ್ತಿಕ್ಯಬುದ್ಧಿರೂಪವಾದ
೫ ಪ್ರತ್ಯಗಾತ್ಮವಿದ್ಯೆಯಿಂದ.
೬ ಪರಮಾತ್ಮನನ್ನು.
೭ ಉಪಾಸಿಸಿ.
೮ ಅರ್ಚಿರಾದಿ ಮಾರ್ಗದಿಂದ.
೯ ಬ್ರಹ್ಮಪ್ರಾಪ್ತಿಗೆ ದ್ವಾರನಾದ ಆದಿತ್ಯನನ್ನು. 'ಆದಿತ್ಯನಿಂದ ಚಂದ್ರನಿಗೆ, ಚಂದ್ರನಿಂದ ವಿದ್ಯುತ್ತಿಗೆ ಅಮಾನವಪುರುಷನು (ಇವರನ್ನು) ಬ್ರಹ್ಮನ ಸಮೀಪಕ್ಕೆ ಒಯ್ಯುತ್ತಾನೆ' ಎಂದು ಛಾ. ಉ. (೫, ೧೦, ೩) ಹೇಳಿದೆ.
೧೦ ಪ್ರಾಣವಿರುವವರಿಗೆ.
೧೧ ಪರಮಾತ್ಮನೇ ಸಕಲ ಚೇತನಗಳಿಗೂ ಆಧಾರ
೧೨ ಪರಮಪ್ರಾಪ್ಯ.
೧೩ ಉತ್ತರ ಮಾರ್ಗದಿಂದ ಹೋದ ಉಪಾಸಕರು 'ಹೇ ಅರ್ಜುನ, ನನ್ನನ್ನು ಹೊಂದಿದ ಮೇಲೆ ಪುನರ್ಜನ್ಮವಿರುವುದಿಲ್ಲ' (ಗೀತಾ, ೮, ೧೬).
೧೪ 'ಆ ಪ್ರಜಾಪತಿಯು ಪ್ರಜಾಕಾಮನಾಗಿ (೧, ೪) ಎಂಬಲ್ಲಿ ಪ್ರಜಾಪತಿನಿರ್ದಿಷ್ಟನಾದ ಪರಮಾತ್ಮನು.
೧೫ ತನ್ನನ್ನು ಹೊಂದಿದವರ ಪುನರಾವೃತ್ತಿಯನ್ನು ತಡೆಯುತ್ತಾನೆ.
೧೬ ಸಂವತ್ಸರರೂಪನಾದ ಪ್ರಜಾಪತಿಯ ವಿಷಯದಲ್ಲಿ ]

೧೧. ಪಂಚಪಾದಗಳೂ[೧] ಹನ್ನೆರಡು ಆಕೃತಿಗಳೂ[೨] ಮತ್ತು ಆವರಣವೂ[೩] ಉಳ್ಳ ಪಿತೃವು[೪] ದ್ಯುಲೋಕಕ್ಕಿಂತ ಊರ್ಧ್ವಸ್ಥಾನದಲ್ಲಿ ಇರುವ

ನೆಂದು (ಕೆಲವರು) ಹೇಳುವರು ಏಳು ಚಕ್ರಗಳೂ[೫] ಮತ್ತು ಆರು ಆರೆ ಕಾಲುಗಳೂ[೬] ಉಳ್ಳ (ರಥಕ್ಕೆ[೭] ಈ ಎಲ್ಲ ಜಗತ್ತು) ನಿಶ್ಚಲವಾಗಿ ಅರ್ಪಿತವಾಗಿದೆಯೆಂದು ಮತ್ತೆ ಕೆಲವರು[೮] ಹೇಳುವರು.

[ಈ ಮಂತ್ರವು ಮತ್ತು ಮುಂದಿನ ಎರಡು ಮಂತ್ರಗಳು ಋಗ್ವೇದದಲ್ಲಿಯೂ (೧, ೧೬೪, ೧೨) ಮತ್ತು ಅಥರ್ವವೇದದಲ್ಲಿಯೂ (೯, ೯, ೧೨) ಬಂದಿವೆ.

೧ ವತ್ಸರ-ಸಂವತ್ಸರ-ಪರಿವತ್ಸರ-ಇಡಾವತ್ಸರ-ಅನುವತ್ಸರರೂಪದಿಂದ ಅಥವಾ ಹೇಮಂತಶಿಶಿರಗಳನ್ನು ಒಂದಾಗಿಮಾಡಿ ಷಡೃತುಗಳನ್ನು ಐದು ಋತುಗಳನ್ನಾಗಿ ಪರಿಗಣಿಸುವುದು. ಈ ಐದನ್ನು ಪಾದಗಳನ್ನಾಗಿ ಉಳ್ಳವನು ಪಂಚಪಾದನು.

೨ ದ್ವಾದಶಮಾಸಗಳನ್ನು ಆಕಾರವಾಗಿ ಉಳ್ಳವನು.

೩ ಬ್ರಹ್ಮಾಂಡಗೋಳಕದ ಆವರಣಕ್ಕೆ ಪುರೀಷವೆಂದು ಹೆಸರು. ಅದೇ ಸ್ಥಾನವಾಗಿ ಉಳ್ಳವನು ಪುರೀಷಿ.

೪ ಎಲ್ಲವನ್ನೂ ಸೃಷ್ಟಿಸುವವನು.

೫ ಆದಿತ್ಯಾದಿ ಸಪ್ತಚಕ್ರಗಳು.

೬ ಋತುರೂಪವಾದ.

೭ ಸಂವತ್ಸರವೆಂಬ ರಥಕ್ಕೆ.

೮ ಕಾಲತತ್ತ್ವವನ್ನು ತಿಳಿದವರು ]

**೧೨.** ಮಾಸವೇ ಪ್ರಜಾಪತಿಯು. ಅವನಿಗೆ ಕೃಷ್ಣಪಕ್ಷವೇ ರಯಿ, ಶುಕ್ಲಪಕ್ಷವು ಪ್ರಾಣ. ಆದುದರಿಂದ[೧] ಈ ಋಷಿಗಳು ಶುಕ್ಲಪಕ್ಷದಲ್ಲಿ ಇಷ್ಟವನ್ನು[೨] ಮಾಡುತ್ತಾರೆ; ಇತರರು[೩] ಕೃಷ್ಣಪಕ್ಷದಲ್ಲಿ[೪] ಮಾಡುತ್ತಾರೆ.

[ಸಂವತ್ಸರವು ರಯಿ-ಪ್ರಾಣ-ರೂಪದಿಂದ ವಿಭಾಗವಾಗಿರುವಂತೆ ಮಾಸವೂ ಕೂಡ ವಿಭಾಗವಾಗಿರುವುದೆಂದು ಆಚಾರ್ಯನು ಉಪಾಸನೆಗಾಗಿ ಹೇಳುತ್ತಾನೆ

೧ ಶುಕ್ಲಪಕ್ಷವು ಪ್ರಾಣವಾದುದರಿಂದ.

೨ ಶೋಭನಕರ್ಮಗಳು.

೩ ಅಜ್ಞಾನಿಗಳು.

೪ ಕೃಷ್ಣಪಕ್ಷವು ಅಪ್ರಾಣವಾದುದರಿಂದ ಅದರಲ್ಲಿ ಯಾವ ಸಾರವೂ ಇಲ್ಲ.]

**೧೩.** ಹಗಲುರಾತ್ರಿಗಳೇ ಪ್ರಜಾಪತಿಯು. ಅವನಿಗೆ ಹಗಲೇ ಪ್ರಾಣ, ರಾತ್ರಿಯೇ ರಯಿ. ಯಾರು ಹಗಲಿನಲ್ಲಿ ರತಿಗಾಗಿ (ಸ್ತ್ರೀಯೊಂದಿಗೆ)

ಕೂಡುವರೊ ಅವರು ಪ್ರಾಣವನ್ನೇ ಶೋಷಿಸುತ್ತಾರೆ;[೧] ರಾತ್ರಿಯಲ್ಲಿ ರತಿಗಾಗಿ ಕೂಡುವುದು ಬ್ರಹ್ಮಚರ್ಯವೇ.

[ಉಪಾಸನೆಗಾಗಿ ಆಚಾರ್ಯನು ಹಗಲುರಾತ್ರಿಗಳನ್ನು ಪ್ರಾಣ-ರಯಿ-ರೂಪದಿಂದ ವಿಭಾಗಿಸುತ್ತಾನೆ.

೧ ಪ್ರಾಣದ ಅಪಚಾರದಿಂದ ಪ್ರಾಣವನ್ನೇ ನಾಶಮಾಡಿಕೊಳ್ಳುತ್ತಾರೆ.]

**೧೪.** ಅನ್ನವೇ ಪ್ರಜಾಪತಿಯು. ಅದರಿಂದಲೇ ರೇತಸ್ಸು ಉತ್ಪನ್ನವಾಗುತ್ತದೆ. ಅದರಿಂದ ಈ ಪ್ರಜೆಗಳು ಹುಟ್ಟುತ್ತಾರೆ.

[ಅನ್ನಪರಿಣಾಮವಾದ ರೇತಸ್ಸು ಪ್ರಜೋತ್ಪತ್ತಿಗೆ ಉಪಾದಾನಕಾರಣವಾಗಿರುವಾಗ ಪ್ರಕೃತಿ-ಪುರುಷ-ಕಾಲಾತ್ಮಕನಾದ ಬ್ರಹ್ಮನು ಹೇಗೆ ಉಪಾದಾನಕಾರಣನು? ಇದಕ್ಕೆ ಉತ್ತರ: ಪ್ರಜಾಪತಿಶಬ್ದದಿಂದ ಹೇಳಲ್ಪಟ್ಟ ಬ್ರಹ್ಮನೇ ಅನ್ನಾವಸ್ಥೆಯಲ್ಲಿಯೂ ಅದರಿಂದ ಉತ್ಪನ್ನವಾದ ರೇತಸ್ಸಿನ ಅವಸ್ಥೆಯಲ್ಲಿಯೂ ಇದ್ದಾನೆ; ಆದುದರಿಂದ ಪ್ರಕೃತಿ, ಪುರುಷ, ಸಂವತ್ಸರ, ಮಾಸ, ಅನ್ನ, ರೇತಸ್ಸು—ಈ ಅವಸ್ಥೆಗಳಲ್ಲಿರುವ ಬ್ರಹ್ಮನಿಂದಲೇ ಎಲ್ಲ ಪ್ರಾಣಿಗಳೂ ಹುಟ್ಟಿರುತ್ತವೆ. ಪ್ರಜಾಪತಿಶಬ್ದದಿಂದ ಹೇಳಲ್ಪಟ್ಟ ಬ್ರಹ್ಮನೇ ಜಗತ್ತಿನ ಉಪಾದಾನಕಾರಣನು ಎಂಬುದು ಭಾವ.]

**೧೫–೧೬.** ಆದುದರಿಂದ ಪ್ರಜಾಪತಿವ್ರತವನ್ನು[೧] ಅನುಷ್ಠಾನಮಾಡುವವರು ಮಿಥುನವನ್ನು ಉತ್ಪಾದಿಸುತ್ತಾರೆ.[೨] ಅವರಿಗೆ ಈ ಬ್ರಹ್ಮಲೋಕ.[೩] ಯಾರು ತಪಸ್ಸು-ಬ್ರಹ್ಮಚರ್ಯಗಳನ್ನು ಅನುಷ್ಠಾನಮಾಡುವರೊ, ಯಾರಲ್ಲಿ ಸತ್ಯವು ಪ್ರತಿಷ್ಠಿತವಾಗಿದೆಯೊ, ಯಾರಲ್ಲಿ ಕುಟಿಲತೆಯಾಗಲಿ ಅನೃತವಾಗಲಿ ಮಾಯೆಯಾಗಲಿ ಇಲ್ಲವೊ ಅಂತಹವರಿಗೆ ಈ ವಿರಜವಾದ[೪] ಬ್ರಹ್ಮಲೋಕ.[೫]

[ಆಚಾರ್ಯ ಪಿಪ್ಪಲಾದನು ಮುಮುಕ್ಷುಗಳಲ್ಲದವರನ್ನು ನಿಂದಿಸಿ ಮುಮುಕ್ಷುಗಳನ್ನು ಹೊಗಳುತ್ತಾನೆ.

೧ 'ಅನ್ನಂ ವೈ ಪ್ರಜಾಪತಿಃ' (೧, ೧೪) ಎಂದು ಹಿಂದಿನ ಮಂತ್ರದಲ್ಲಿ ಹೇಳಿರುವಂತೆ ಪ್ರಜಾಪತಿಶಬ್ದದಿಂದ ಹೇಳಲ್ಪಟ್ಟ ಅನ್ನವನ್ನು ಭಕ್ಷಿಸುವವರು ಎಂದರೆ ಅನ್ನಭಕ್ಷಣಶೀಲರೂ ಬ್ರಹ್ಮಚರ್ಯರಹಿತರೂ ಆದವರು.

೨ ಪ್ರಜೆಗಳನ್ನು ಸೃಷ್ಟಿಸುತ್ತಾರೆ.

೩ ಪುತ್ರಪಶ್ವಾದಿರೂಪವಾದ ಮತ್ತು ಕಾರ್ಯಭೂತನಾದ ಬ್ರಹ್ಮನ ಲೋಕ. ಇದು ಆಪ್ತಕಾಮರಿಗಲ್ಲ

೪ ನಿರ್ದೋಷವಾದ

೫ ಬ್ರಹ್ಮವೇ ಲೋಕವಾಗಿರುವುದು ಬ್ರಹ್ಮಲೋಕ, ಬ್ರಹ್ಮೈವ ಲೋಕೋ ಬ್ರಹ್ಮಲೋಕಃ]

# ಎರಡನೆಯ ಪ್ರಶ್ನೆ

೧. ಅನಂತರ ಭಾರ್ಗವ ವೈದರ್ಭಿಯು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಎಷ್ಟು ದೇವತೆಗಳು ಪ್ರಜೆಗಳನ್ನು[೧] ಧರಿಸಿಕೊಂಡಿರುತ್ತಾರೆ? ಯಾರು ಇದನ್ನು[೨] ಪ್ರಕಾಶಗೊಳಿಸುತ್ತಾರೆ? ಮತ್ತೆ ಇವರಲ್ಲಿ ಯಾವನು ಶ್ರೇಷ್ಠನು?

[ದೇಹ ಇಂದ್ರಿಯ ಮನಸ್ಸು ಪ್ರಾಣ ಇವುಗಳಿಗಿಂತ ಭಿನ್ನನಾದ ಪ್ರತ್ಯಗಾತ್ಮನ ಸ್ವರೂಪವನ್ನು ನಿರ್ಧರಿಸುವುದಕ್ಕೋಸ್ಕರ ಈ ಪ್ರಶ್ನೆಗಳು ಹಾಕಲ್ಪಟ್ಟಿವೆ.

[೧] ಸ್ಥಾವರಜಂಗಮರೂಪವಾದ ಪ್ರಜೆಗಳನ್ನು.

[೨] ಶರೀರವನ್ನು ಅಥವಾ ಅದರ ಕಾರ್ಯವನ್ನು.]

೨. ಪಿಪ್ಪಲಾದನು ಅವನಿಗೆ ಹೇಳಿದನು: ಈ ಆಕಾಶ, ದೇವನಾದ[೧] ವಾಯು, ಅಗ್ನಿ, ನೀರು, ಪೃಥಿವಿ ಮತ್ತು ವಾಕ್ಕು[೨] ಮನಸ್ಸು ಕಣ್ಣು ಕಿವಿ[೩]— ಇವರು (ಶರೀರವನ್ನು) ಪ್ರಕಾಶಿಸಿ (ಹೀಗೆ) ಹೇಳುತ್ತಾರೆ: 'ನಾವು ಈ ಶರೀರ ವನ್ನು ಎತ್ತಿಹಿಡಿದು ಧರಿಸಿರುತ್ತೇವೆ.'[೪]

[ಮುಖ್ಯಪ್ರಾಣನಿಗೆ ಮಾತ್ರ ಧಾರಕತ್ವ ಪ್ರಕಾಶಕತ್ವ ಶ್ರೇಷ್ಠತ್ವ ಇವೇ ಮೊದಲಾದ ಗುಣಗಳಿವೆಯೆಂದು ತೋರಿಸಲು ಈ ಆಖ್ಯಾಯಿಕೆಯನ್ನು ಆಚಾರ್ಯನು ಹೇಳುತ್ತಾನೆ.

[೧] ಗಮನಶೀಲನಾದುದರಿಂದ.

[೨] ಇದು ಕರ್ಮೇಂದ್ರಿಯಗಳಿಗೆ ಉಪಲಕ್ಷಣ.

[೩] ಇವು ಜ್ಞಾನೇಂದ್ರಿಯಗಳಿಗೆ ಉಪಲಕ್ಷಣ.

[೪] 'ಬಾಣದಂತೆ ಸಂಚರಿಸುವ ಶರೀರಕ್ಕೆ ಸಮರ್ಥರಾದ ನಾವೇ ಅವಲಂಬನೆಯಾ ರಾಗಿರುತ್ತೇವೆ' ಎಂದು ಆಕಾಶಾದಿಗಳು ಹೇಳಿದರು.]

೩. ಮುಖ್ಯನಾದ ಪ್ರಾಣನು ಅವರಿಗೆ ಹೇಳಿದನು: 'ಮೋಹವನ್ನು ಹೊಂದಬೇಡಿರಿ; ನಾನೇ ನನ್ನನ್ನು ಹೀಗೆ ಐದು ಬಗೆಯಾಗಿ[೧] ವಿಭಾಗಿಸಿ ಕೊಂಡು ಈ ಶರೀರವನ್ನು ಎತ್ತಿಹಿಡಿದು ಧರಿಸಿರುತ್ತೇನೆ.'[೨] ಅವರು ಅವನ ಮಾತನ್ನು ನಂಬಲಿಲ್ಲ.

[[೧] ಪ್ರಾಣ ಅಪಾನ ವ್ಯಾನ ಸಮಾನ ಉದಾನ ಹೀಗೆ ಐದು ಬಗೆಯಾಗಿ ವಿಂಗಡಿಸಿ ಕೊಂಡು.

[2] ಅವರಿಗೆ ವಾಯುವು ಹೀಗೆ ಹೇಳಿದನು 'ಹೇ ಆಕಾಶಾದಿಗಳೆ, ಅವಕಾಶಾದಿಗಳನ್ನು ಸೃಷ್ಟಿಸುವಂಥ ಸಾಮರ್ಥ್ಯವು ನಿಮಗಿರಬಹುದು. ಎಲ್ಲ ಕಾರ್ಯಗಳನ್ನೂ ಮಾಡಲು ನಿಮಗೆ ಶಕ್ತಿಯಿಲ್ಲ. ನಾನು ನಿಮಗೆ ಕಾರಣನಾದ್ದರಿಂದ ನಿಮ್ಮೆಲ್ಲರ ಕೆಲಸವನ್ನೂ ಮಾಡಬಲ್ಲೆನು. ನಾನು ಮಾಡುವ ಜೀವನಕಾರ್ಯವನ್ನು ನೀವು ಯಾರೂ ಮಾಡಲಾರಿರಿ.']

೪. ಮುಖ್ಯಪ್ರಾಣನು ಅಭಿಮಾನದಿಂದ ಮೇಲಕ್ಕೆ ಎದ್ದಂತೆ[1] ಮಾಡಿದನು. ಅವನು ಮೇಲಕ್ಕೆದ್ದ ಕೂಡಲೆ ಇತರರೆಲ್ಲರೂ ಎದ್ದರು, ಮತ್ತು ಅವನು ನಿಲ್ಲಲು ಎಲ್ಲರೂ ನಿಂತರು. ತಮ್ಮ ರಾಜನು ಮೇಲಕ್ಕೆದ್ದಾಗ ಎಲ್ಲ ಜೇನುಹುಳುಗಳು ಮೇಲಕ್ಕೇಳುವಂತೆ ಮತ್ತು ಅವನು ನಿಂತಾಗ ಎಲ್ಲವೂ ನಿಲ್ಲುವಂತೆ, ವಾಕ್ಕು ಮನಸ್ಸು ಮತ್ತು ಕಣ್ಣು ಕಿವಿ (ಇವರು ಮಾಡಿದರು). ಇವರು ಪ್ರೀತರಾಗಿ ಪ್ರಾಣನನ್ನು ಸ್ತುತಿಸಿದರು.

[[1]'ಇವ' ಎಂದರೆ ಸ್ವಲ್ಪ ಎಂದರ್ಥ. ಪ್ರಾಣನು ನಿಜವಾಗಿ ಹೊರಗೆ ಬಂದಿದ್ದರೆ ಶರೀರವು ನಾಶವಾಗುತ್ತಿತ್ತು. ಆದುದರಿಂದ ಸ್ವಲ್ಪ ಮೇಲಕ್ಕೆ ಎದ್ದಂತೆ ಮಾಡಿದನು.]

೫. ಇವನು[1] ಅಗ್ನಿರೂಪದಿಂದ ತಪಿಸುತ್ತಾನೆ. ಇವನು ಸೂರ್ಯ,[2] ಪರ್ಜನ್ಯ, ಇಂದ್ರ ಮತ್ತು ವಾಯು; ಇವನು ಪೃಥ್ವಿ, ದೇವನಾದ ರಯಿ,[3] ಸತ್ ಅಸತ್[4] ಮತ್ತು ಅಮೃತ.[5]

[[1] ಮುಖ್ಯಪ್ರಾಣನು.
[2] ಎಲ್ಲರ ಪ್ರಾಣಗಳಿಗೂ ಆಧಾರನಾದ್ದರಿಂದ ಪ್ರಾಣನೇ ಸೂರ್ಯನು.
[3] ಅನ್ನಭೂತನಾದ ದೇವ ಎಂದರೆ ಚಂದ್ರ.
[4] ಸತ್ ಅಸತ್ ಪದಗಳಿಗೆ ಈ ಅರ್ಥಗಳುಂಟು—ವರ್ತಮಾನ, ವರ್ತಮಾನವಲ್ಲದುದು, ಪ್ರತ್ಯಕ್ಷ ಅಪ್ರತ್ಯಕ್ಷ ವಸ್ತುಗಳು, ಸ್ಥೂಲಸೂಕ್ಷ್ಮಗಳು ಅಥವಾ ಚೇತನಾ-ಚೇತನಗಳು
[5] ಈ ಶಬ್ದವು ಮೋಕ್ಷಪರವಾದದ್ದು, ಏಕೆಂದರೆ ಮೋಕ್ಷವೂ ಕೂಡ ಮುಖ್ಯಪ್ರಾಣನ ಅಧೀನದಲ್ಲಿದೆ.]

೬. ರಥಚಕ್ರದ ಗುಂಬದಲ್ಲಿ ಆರೆಕಾಲುಗಳು ಸೇರಿಕೊಂಡಿರುವಂತೆ ಎಲ್ಲವೂ ಪ್ರಾಣನಲ್ಲಿ ಪ್ರತಿಷ್ಠಿತವಾಗಿರುವುದು: ಋಕ್ಕುಗಳು ಯಜುಸ್ಸುಗಳು ಸಾಮಗಳು; ಯಜ್ಞ, ಕ್ಷತ್ರಿಯ ಮತ್ತು ಬ್ರಾಹ್ಮಣ.[1]

[[೧] ಬ್ರಹ್ಮಕ್ಷತ್ರಶಬ್ದಗಳು ಸ್ಥಾವರಜಂಗಮರೂಪವಾದ ಪ್ರಾಣಿಗಳಿಗೆ ಉಪಲಕ್ಷಣವಾಗಿರುವುವು.]

೭. ನೀನೇ ಪ್ರಜಾಪತಿಯಾಗಿ[೧] ಗರ್ಭದಲ್ಲಿ ಸಂಚರಿಸುತ್ತೀಯೆ ಮತ್ತು ನೀನೇ ಹುಟ್ಟುತ್ತೀಯೆ. ಹೇ ಪ್ರಾಣ, ಪ್ರಾಣಗಳೊಂದಿಗೆ ಇರುವ ನಿನಗೆ ಈ ಪ್ರಜೆಗಳು ಬಲಿಯನ್ನು[೨] ಕೊಡುತ್ತಿರುವರು.

[[೧] ಪ್ರಜೆಗಳ ರಕ್ಷಕನಾಗಿ ಪ್ರಾಣಾದಿವಾಯುರೂಪದಿಂದ ಗರ್ಭದಲ್ಲಿ ಸಂಚರಿಸುತ್ತಿರುವೆ.

[೨] ಅನ್ನವೇ ಮೊದಲಾದುವು.]

೮. ದೇವತೆಗಳಿಗೆ ಹವಿಸ್ಸನ್ನು ಕೊಂಡುಹೋಗುವವರಲ್ಲಿ ನೀನು ಶ್ರೇಷ್ಠನು. ನೀನು ಪಿತೃಗಳಿಗೆ ಪ್ರಥಮ ಸ್ವಧಾ.[೧] ಅಥರ್ವಾಂಗಿರಸಋಷಿಗಳಿಗೆ ನೀನು ಸತ್ಯವಾದ ಚರಿತವಾಗಿರುವೆ.[೨]

[[೧] ಪಿತೃಗಳಿಗೆ ಪ್ರೀತಿಯನ್ನು ಉಂಟುಮಾಡುವ ಮುಖ್ಯನು ನೀನು.

[೨] ನಿತ್ಯನೈಮಿತ್ತಿಕರೂಪವಾದ ಉತ್ಕೃಷ್ಟ ಕರ್ಮ ನೀನೇ.]

೯. ಹೇ ಪ್ರಾಣ, ನೀನು ಇಂದ್ರ;[೧] ತೇಜಸ್ಸಿನಿಂದ[೨] ನೀನು ರುದ್ರನಾಗಿರುವೆ, ರಕ್ಷಕನಾಗಿರುವೆ.[೩] ಜ್ಯೋತಿಗಳಿಗೆ ಒಡೆಯನಾದ ಸೂರ್ಯನಾಗಿ ನೀನೇ ಅಂತರಿಕ್ಷದಲ್ಲಿ ಸಂಚರಿಸುತ್ತಿರುವೆ.

[[೧] ಪರಮೇಶ್ವರ.

[೨] ಸರ್ವಸಂಹರಣಸಾಮರ್ಥ್ಯದಿಂದ.

[೩] ಸ್ಥಿತಿಕಾಲದಲ್ಲಿ.]

೧೦. ಹೇ ಪ್ರಾಣ, ನೀನು[೧] ಮಳೆಗರೆಯುವಾಗ ಈ ಪ್ರಜೆಗಳು ತಮಗೆ ಯಥೇಷ್ಟವಾಗಿ ಅನ್ನವಾಗುವುದೆಂಬ ಆಶೆಯಿಂದ ಆನಂದಿತರಾಗಿರುತ್ತಾರೆ.[೨]

[[೧] ಮೇಘರೂಪದಿಂದ.

[೨] ಛಾ. ಉ. ೭, ೧೦, ೧ ನೋಡಿ.]

೧೧. ಹೇ ಪ್ರಾಣ, ನೀನು ವ್ರಾತ್ಯನು,[೧] ನೀನು ಮುಖ್ಯನಾದ ಋಷಿ; ನೀನು ವಿಶ್ವದ ಅತ್ತೃ[೨] ಮತ್ತು ಸಾಧುಗಳ ರಕ್ಷಕ. ನಾವು ಭೋಗ್ಯವಸ್ತುಗಳನ್ನು ಕೊಡುವವರು. ಹೇ ಮಾತರಿಶ್ವ, ನೀನು ನಮ್ಮ ತಂದೆ.

[೧ ಸಂಸ್ಕಾರಹೀನನಾದ ಬ್ರಹ್ಮ
೨ ಸಂಹಾರಕ ]

೧೨. ನಿನ್ನ ಯಾವ ಶಕ್ತಿಯು ವಾಕ್ಕು ಶ್ರೋತ್ರ ಚಕ್ಷು ಇವುಗಳಲ್ಲಿರುವುದೊ ಮತ್ತು ಮನಸ್ಸಿನಲ್ಲಿ ಸಂತತವಾಗಿರುವುದೊ ಅದನ್ನು ಶಾಂತವಾಗಿ ಮಾಡು.[೧] (ಶರೀರದಿಂದ ಹೊರಗೆ) ಹೋಗಬೇಡ.

[೧ ಶರೀರದಿಂದ ಹೊರಗೆ ಹೋಗಿ ಅದನ್ನು ಅಶಾಂತವಾಗಿ ಮಾಡಬೇಡ ]

೧೩. ಇದೆಲ್ಲವೂ ಪ್ರಾಣನ ವಶದಲ್ಲಿ ಇರುವುದು.[೧] ಯಾವುದು ದ್ಯುಲೋಕದಲ್ಲಿ ಪ್ರತಿಷ್ಠಿತವಾಗಿರುವುದೊ (ಅದೂ ಪ್ರಾಣನ ವಶದಲ್ಲಿರುವುದು). ತಾಯಿಯು ಮಕ್ಕಳನ್ನು ರಕ್ಷಿಸುವಂತೆ (ನಮ್ಮನ್ನು) ರಕ್ಷಿಸು. ಶ್ರೀಗಳನ್ನೂ ಮತ್ತು ಪ್ರಜ್ಞೆಯನ್ನೂ ನಮಗೆ ಕೊಡು.[೨]

[೧ ಜಗತ್ತೆಲ್ಲವೂ ಪ್ರಾಣನ ಇಚ್ಛೆಗೆ ಅಧೀನವಾಗಿದೆ.
೨ ನಮ್ಮ ಕಾರ್ಯಗಳನ್ನು ನೆರವೇರಿಸಲು ಆವಶ್ಯಕವಾದ ಸಾಮರ್ಥ್ಯರೂಪದ ಶ್ರೀ ಮತ್ತು ಅದಕ್ಕೆ ಅನುಕೂಲವಾದ ಪ್ರಜ್ಞೆ.]

# ಮೂರನೆಯ ಪ್ರಶ್ನೆ

೧. ಅನಂತರ ಕೌಸಲ್ಯ ಆಶ್ವಲಾಯನನು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಈ ಪ್ರಾಣನು ಯಾವುದರಿಂದ ಹುಟ್ಟುತ್ತಾನೆ? ಈ ಶರೀರಕ್ಕೆ ಹೇಗೆ ಬರುವನು? ತನ್ನನ್ನು ವಿಭಾಗಿಸಿಕೊಂಡು (ಶರೀರದಲ್ಲಿ) ಹೇಗೆ ಪ್ರತಿಷ್ಠಿತನಾಗಿರುವನು? ಯಾವುದರಿಂದ ಉತ್ಕ್ರಮಿಸುವನು? ಅವನು ಒಳಗೂ ಹೊರಗೂ[೧] ಹೇಗೆ ಇರುತ್ತಾನೆ?

[[೧] ಹೊರಗಿನ ರೂಪದಿಂದ.]

೨. ಪಿಪ್ಪಲಾದನು ಅವನಿಗೆ ಹೇಳಿದನು: ನೀನು ಅತಿಪ್ರಶ್ನೆಗಳನ್ನು[೧] ಕೇಳುತ್ತಿರುವೆ. ನೀನು ಬ್ರಹ್ಮಿಷ್ಠನಾಗಿದ್ದೀಯೆ.[೨] ಆದುದರಿಂದ ನಿನಗೆ ನಾನು ಹೇಳುತ್ತೇನೆ.

[[೧] ಪ್ರಶ್ನಾತೀತವೂ ಪ್ರಶ್ನಾಯೋಗ್ಯವೂ ಆದ ರಹಸ್ಯಾರ್ಥಗಳನ್ನು ಕೇಳುತ್ತಿರುವೆ.
[೨] ನೀನು ಬ್ರಹ್ಮವಿದನು, ಸಾಮಾನ್ಯ ಮನುಷ್ಯನಲ್ಲ.]

೩. ಈ ಪ್ರಾಣನು ಪರಮಾತ್ಮನಿಂದಲೇ ಹುಟ್ಟಿರುತ್ತಾನೆ.[೧] ನೆರಳು ಪುರುಷನನ್ನು ಅನುಸರಿಸುವಂತೆಯೂ, ಅವನಲ್ಲಿ ಮನಸ್ಸು ಯಾವಾಗಲೂ ಇರುವಂತೆಯೂ, ಪ್ರಾಣನು ಇವನ ಶರೀರಕ್ಕೆ ಅಯತ್ನದಿಂದ ಬರುತ್ತಾನೆ.[೨]

[[೧] ಇದು ಮೊದಲನೆಯ ಪ್ರಶ್ನೆಗೆ ಉತ್ತರ.
[೨] ಇದು ಎರಡನೆಯ ಪ್ರಶ್ನೆಗೆ ಉತ್ತರ ನೆರಳಿನ ಅನುಸರಣೆಗೆ ಶರೀರವಲ್ಲದೆ ಮತ್ತೆ ಯಾವ ಕಾರಣವೂ ಇಲ್ಲ. ಪುನಃ ಮನಃಪ್ರಾಣಗಳು ಪುರುಷಚ್ಛಾಯೆಯಂತೆ ಪುರುಷನೊಂದಿಗೆ ಶರೀರವನ್ನು ಪ್ರವೇಶಿಸುತ್ತವೆ. ಆದುದರಿಂದ ಪ್ರಾಣಗಮನಕ್ಕೆ ಮನಸ್ಸಿನಂತೆ ಬೇರೆ ಯಾವ ಕಾರಣವೂ ಇಲ್ಲ.]

೪. ಹೇಗೆ ಸಮ್ರಾಟನೇ, 'ಈ ಗ್ರಾಮಗಳನ್ನು ಆಳು, ಈ ಗ್ರಾಮಗಳನ್ನು ಆಳು' ಎಂದು ಅಧಿಕಾರಿಗಳನ್ನು ನಿಯೋಗಿಸುತ್ತಾನೆಯೊ ಹಾಗೆಯೇ ಈ ಪ್ರಾಣನು[೧] ಉಳಿದ ಪ್ರಾಣಗಳನ್ನು ಬೇರೆಬೇರೆಯಾಗಿಯೇ ನಿಯಂತ್ರಿಸುತ್ತಾನೆ.

[[೧] ತನ್ನ ಅಂಶಗಳಾದ ಅಪಾನವ್ಯಾನಗಳ ಮೂಲಕ.]

೫. ವಾಯುಉಪಸ್ಥಗಳಲ್ಲಿ ಅಪಾನವಾಯು,[೧] ಮೂಗುಬಾಯಿಗಳಿಂದ (ಬರುತ್ತಿರುವ) ಈ ಪ್ರಾಣನು ಕಣ್ಣುಕಿವಿಗಳಲ್ಲಿ ಪ್ರತಿಷ್ಠಿತನಾಗಿರುವನು. ಮಧ್ಯದಲ್ಲಿ ಸಮಾನವಾಯು(ವಾಗಿರುವನು); ಹೋಮಮಾಡಿದ[೨] ಈ ಅನ್ನವನ್ನು ಸಮಾನವಾಗಿ ಹಂಚುವುದರಿಂದ ಈ ಏಳು ಶಿಖೆಗಳು[೩] ಉಂಟಾಗುತ್ತಿರುವುವು.

[[೧] ಪ್ರಾಣವೇ ಅಪಾನವಾಗಿ ಕಾರ್ಯಗಳನ್ನು ನೆರವೇರಿಸುತ್ತಿರುವುದು.
[೨] ಊಟಮಾಡಿದ.
[೩] ಮುಂಡಕೋಪನಿಷತ್ತಿನಲ್ಲಿ (೧, ೨, ೪) ಹೇಳಿರುವ ಕಾಳೀ ಕರಾಳೀ ಮೊದಲಾದ ಶಿಖೆಗಳು.]

೬. ಈ ಜೀವಾತ್ಮನು ಹೃದಯದಲ್ಲಿಯೇ[೧] (ವಾಸಿಸುವನು). ಇಲ್ಲಿ ನೂರೊಂದು ನಾಡಿಗಳು (ಇರುವುವು); ಅವುಗಳ ಒಂದೊಂದರಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಿರುವುವು. ಇವುಗಳ ಒಂದೊಂದರಲ್ಲಿ ನೂರು ಸಾವಿರ ನಾಡಿಗಳಿರುವುವು.[೨] ಅವುಗಳಲ್ಲಿ ವ್ಯಾನವು ಸಂಚರಿಸುತ್ತದೆ

[[೧] ಎಲ್ಲಿ ಪ್ರಾಣವು ಸಮಾನರೂಪದಿಂದ ಇರುವುದೊ ಅಲ್ಲಿ.
[೨] ಈ ಭಾಷ್ಯಕಾರರು ಮಾಡಿರುವ ನಾಡೀವಿಭಾಗವು ಮೂಲದಲ್ಲಿ ಇರುವುದಕ್ಕಿಂತ ಸ್ವಲ್ಪ ಭಿನ್ನವಾಗಿದೆ.]

೭. ಈಗ ಒಂದು ನಾಡಿಯಿಂದ ಉದಾನವಾಯುವು ಊರ್ಧ್ವಗಾಮಿಯಾಗಿ ಪುಣ್ಯದಿಂದ ಪುಣ್ಯಲೋಕಕ್ಕೂ, ಪಾಪದಿಂದ ನರಕಕ್ಕೂ, ಪುಣ್ಯಪಾಪಗಳೆರಡರಿಂದ ಮನುಷ್ಯಲೋಕಕ್ಕೂ ಒಯ್ಯುತ್ತದೆ.

[‘ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರತಿತಿಷ್ಠತೇ?’ ಎಂಬ ಪ್ರಶ್ನೆಗೆ ‘ಯಥಾ ಸಮ್ರಾಟ್’ ಎಂಬಲ್ಲಿಂದ ಆರಂಭಿಸಿ ‘ಉಭಾಭ್ಯಾಂ ಏವ ಮನುಷ್ಯಲೋಕಮ್’ ಎಂಬಲ್ಲಿನ ವರೆಗೆ ಉತ್ತರವನ್ನು ಹೇಳಿದ್ದಾಯಿತು. ಇದರ ಮಧ್ಯದಲ್ಲಿ ‘ಕೇನೋತ್ಕ್ರಾಮತೇ?’ ಎಂಬ ನಾಲ್ಕನೆಯ ಪ್ರಶ್ನೆಗೆ ‘ಅಥೈಕಯೋರ್ಧ್ವ . . . . ನಯತಿ’ ಎಂಬುದರಿಂದ ಉತ್ತರವನ್ನು ಹೇಳಿದೆ.]

೮. ಕಣ್ಣಿನಲ್ಲಿರುವ ಈ ಪ್ರಾಣನನ್ನು ಅನುಗ್ರಹಿಸುತ್ತ[೧] ಹೊರಗಿನ ಪ್ರಾಣನೇ ಆದಿತ್ಯನಾಗಿ[೨] ಉದಯಿಸುತ್ತಾನೆ. ಪೃಥಿವಿಯಲ್ಲಿರುವ ದೇವತೆಯೇ

ಪುರುಷನ ಅಪಾನವನ್ನು ವಶಪಡಿಸಿಕೊಂಡು ಇರುತ್ತದೆ. ಮಧ್ಯದಲ್ಲಿರುವ ಆಕಾಶವೇ ಸಮಾನವು.[೩] ವಾಯುವು ವ್ಯಾನ.

['ಅವನು ಹೊರಗೆ ಹೇಗೆ ಇರುತ್ತಾನೆ?' (೩, ೧) ಎಂಬ ಪ್ರಶ್ನೆಗೆ ಇದು ಉತ್ತರ.

[೧] ಬೆಳಕೆಂಬ ಸಹಕಾರಿಕಾರಣವನ್ನು ಒದಗಿಸುತ್ತ.

[೨] ಪ್ರಾಣನಿಗೂ ಆದಿತ್ಯನಿಗೂ ಭೇದವಿರುವುದರಿಂದ ಪ್ರಾಣನು ಆದಿತ್ಯನಾಗುವುದಿಲ್ಲ; ಹೀಗಿದ್ದರೂ ಪ್ರಾಣಕಲೆಗಳು ಎಲ್ಲೆಲ್ಲಿಯೂ ಅಭೇದವಾಗಿ ಇರುವುದರಿಂದ ಹೊರಗಿನ ಸೂರ್ಯನನ್ನೇ ಪ್ರಾಣನೆಂದು ಹೇಳಿದೆ, ಅಥವಾ ಉಪಾಸನೆಗಾದರೂ ಆಗಬಹುದು

[೩] ಇದು ಮುಖ್ಯವಾದ ಅರ್ಥವಲ್ಲ, ಗೌಣವಾದ ಅರ್ಥ.]

೯-೧೦. ತೇಜಸ್ಸೇ[೧] ಉದಾನವು; ಆದುದರಿಂದ[೨] ಕ್ಷೀಣವಾದ ತೇಜಸ್ಸುಳ್ಳ[೩] ಪುರುಷನು[೪] ಮನಸ್ಸಿನಲ್ಲಿ ಪ್ರವಿಷ್ಟವಾದ ಇಂದ್ರಿಯಗಳೊಂದಿಗೆ ಪುನರ್ಜನ್ಮವನ್ನು ಹೊಂದಲು ತನ್ನ ಚಿತ್ತದಲ್ಲಿರುವ ಕಾಮನೆಯ ಮೂಲಕ ಪ್ರಾಣಕ್ಕೆ ಬರುತ್ತಾನೆ; ಪ್ರಾಣನು ತೇಜಸ್ಸು ಮತ್ತು ಪರಮಾತ್ಮರೊಂದಿಗೆ ಕೂಡಿ[೫] (ಅವನ) ಸಂಕಲ್ಪಕ್ಕೆ ಅನುಸಾರವಾದ ಲೋಕಕ್ಕೆ ಒಯ್ಯುತ್ತಾನೆ.

[[೧] ತೇಜಸ್ಸಿನೊಂದಿಗೆ ಪ್ರಾಣವು ಮೇಲಕ್ಕೆ ಒಯ್ಯಲು ಕಾರಣವಾಗಿರುವುದರಿಂದಲೂ ತೇಜಸ್ಸೂ ಕೂಡ ಮೇಲಕ್ಕೆ ಒಯ್ಯಲು ಕಾರಣವಾಗಿರುವುದರಿಂದಲೂ ತೇಜಸ್ಸೇ ಉದಾನವು ಎಂದು ಹೇಳಿದ್ದು ಯುಕ್ತ.

[೨] ಉದಾನಶಬ್ದಿತವಾದ ತೇಜಸ್ಸೇ ಮೇಲಕ್ಕೆ ಒಯ್ಯುವುದರಿಂದ.

[೩] ಶರೀರದ ಉಷ್ಣವು ಹೋದಾಗ.

[೪] ಮರಣದೆಸೆಯಲ್ಲಿರುವ ಜೀವನು.

[೫] 'ಪ್ರಾಣನು ತೇಜಸ್ಸಿನಲ್ಲಿ ಸೇರುತ್ತಾನೆ, ತೇಜಸ್ಸು ಪರದೇವತೆಯಲ್ಲಿ ಸೇರುತ್ತದೆ' ಛಾ. ಉ. ೬, ೮, ೬ ಎಂಬ ಶ್ರುತಿಯ ಪ್ರಕಾರ.]

೧೧. ಯಾವನು ಹೀಗೆ ಅರಿತಿರುತ್ತಾನೆಯೊ ಅವನು ಪ್ರಾಣನನ್ನು ಅರಿಯುತ್ತಾನೆ. ಅವನ ಪುತ್ರಪೌತ್ರಾದಿಗಳು ನಾಶವಾಗುವುದಿಲ್ಲ; ಅವನು ಅಮೃತನಾಗುವನು. ಈ ವಿಷಯದಲ್ಲಿ ಈ ಮಂತ್ರವಿರುತ್ತದೆ.

೧೨. ಪ್ರಾಣನ ಉತ್ಪತ್ತಿ,[೧] ಶರೀರಪ್ರವೇಶ,[೨] (ಪಾಯೂಪಸ್ಥಗಳಲ್ಲಿ) ಸ್ಥಾನ, ವಿಭುತ್ವ[೩] ಮತ್ತು ಶರೀರದಲ್ಲಿ ತಾನು ಮಾಡಿಕೊಂಡಿರುವ ಐದು

ಭಾಗಗಳು[೪]—ಇವುಗಳನ್ನು ಅರಿತುಕೊಂಡು ಅಮೃತವನ್ನು ಹೊಂದುತ್ತಾನೆ, ಅರಿತುಕೊಂಡು ಅಮೃತವನ್ನು ಹೊಂದುತ್ತಾನೆ.

[[೧] ಪರಮಾತ್ಮನಿಂದ ಪ್ರಾಣನ ಉತ್ಪತ್ತಿ.
[೨] ಮನಸ್ಸಿನೊಂದಿಗೆ ಶರೀರಕ್ಕೆ ಬರುವುದು.
[೩] 'ಯಥಾ ಸಮ್ರಾಡೇವಾಧಿಕೃತಾನ್' (೩, ೪) ಎಂದು ಹೇಳಿದಂತೆ.
[೪] ಒಳಗೆ ಪ್ರಾಣಾದಿರೂಪದಿಂದ ಮಾಡಿಕೊಂಡಿರುವ ಐದು ಬಗೆಯ ಸ್ಥಿತಿಗಳು.]

# ನಾಲ್ಕನೆಯ ಪ್ರಶ್ನೆ

೧. ಅನಂತರ ಸೌರ್ಯಾಯಣೀ ಗಾರ್ಗ್ಯನು ಇವನನ್ನು ಪ್ರಶ್ನಿಸಿದನು: ಹೇ ಭಗವಂತನೆ, ಈ ಪುರುಷನಲ್ಲಿ[೧] ಯಾವುವು ನಿದ್ರಿಸುವುವು ಮತ್ತು ಯಾವುವು ಎಚ್ಚತ್ತಿರುವುವು? ಈ ದೇವನು[೨] ಎಂತಹವನಾಗಿ ಸ್ವಪ್ನಗಳನ್ನು[೩] ನೋಡುವನು? ಯಾವ ಕಾರಣದಿಂದ ಈ ಸುಖವು[೪] ಉಂಟಾಗುವುದು? ಯಾರಲ್ಲಿ ಈ ಎಲ್ಲವೂ ಪ್ರತಿಷ್ಠಿತವಾಗುವುದು?

[೧ ಪುರುಷನು ಮಲಗಿರುವಾಗ.
೨ ಜೀವಾತ್ಮನು.
೩ ರಥವೇ ಮೊದಲಾದುವು. ಬೃ. ಉ ೪, ೩, ೧ ನೋಡಿ.
೪ ವಿಷಯಸುಖ ]

೨. ಪಿಪ್ಪಲಾದನು ಅವನಿಗೆ ಹೇಳಿದನು: ಎಲೈ ಗಾರ್ಗ್ಯನೆ, ಅಸ್ತವಾಗುತ್ತಿರುವ ಸೂರ್ಯನ ಕಿರಣಗಳೆಲ್ಲ ಈ ತೇಜೋಮಂಡಲದಲ್ಲಿ ಹೇಗೆ ಒಂದಾಗುತ್ತವೆಯೊ ಮತ್ತು ಪುನಃ ಪುನಃ ಉದಯಿಸುತ್ತಿರುವ (ಸೂರ್ಯನ) ಆ (ಕಿರಣಗಳು) ಹೇಗೆ ಪ್ರಸರಿಸುತ್ತವೆಯೊ ಹಾಗೆಯೇ ಅದೆಲ್ಲವೂ[೧] ಪರಮ ದೇವನಾದ ಮನಸ್ಸಿನಲ್ಲಿ[೨] ಒಂದಾಗುತ್ತದೆ. ಆದುದರಿಂದ ಆಗ ಈ ಪುರುಷನು ಕೇಳುವುದಿಲ್ಲ, ನೋಡುವುದಿಲ್ಲ, ಮೂಸುವುದಿಲ್ಲ, ರುಚಿನೋಡುವುದಿಲ್ಲ, ಸ್ಪರ್ಶಿಸುವುದಿಲ್ಲ, ಮಾತನಾಡುವುದಿಲ್ಲ, ತೆಗೆದುಕೊಳ್ಳುವುದಿಲ್ಲ, ಆನಂದಪಡುವುದಿಲ್ಲ, ಬಿಡುವುದಿಲ್ಲ, ಹೋಗುವುದಿಲ್ಲ; 'ನಿದ್ರಿಸುತಿದ್ದಾನೆ'[೩] ಎಂದು ಜನರು ಹೇಳುತ್ತಾರೆ.

[೧ ಇಂದ್ರಿಯಸಮೂಹವೆಲ್ಲವೂ.
೨ ಮನಸ್ಸು ದ್ಯೋತನಾದಿಗುಣಗಳಿಂದ ಕೂಡಿರುವುದರಿಂದ ಇತರರಿಗಿಂತ ಉತ್ಕೃಷ್ಟವೆಂದು ಹೇಳಲ್ಪಟ್ಟಿದೆ
೩ 'ಈ ಪುರುಷನಲ್ಲಿ ಯಾವುವು ನಿದ್ರಿಸುವುವು'' ಎಂಬ ಪ್ರಶ್ನೆಗೆ ಈ ಮಂತ್ರದಲ್ಲಿ ಉತ್ತರವನ್ನು ಹೇಳಿದೆ. ಬಾಹ್ಯ-ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳು ಮಲಗುತ್ತವೆ ಎಂದರ್ಥ.]

೩. ಈ (ಶರೀರವೆಂಬ) ಪುರದಲ್ಲಿ ಪ್ರಾಣಾಗ್ನಿಗಳೇ[೧] ಎಚ್ಚತ್ತಿರುವುವು. ಈ ಅಪಾನವೇ ಗಾರ್ಹಪತ್ಯಾಗ್ನಿ; ವ್ಯಾನವು ಅನ್ವಾಹಾರ್ಯಪಚನವೆಂದು

ಹೇಳಲ್ಪಟ್ಟ ದಕ್ಷಿಣಾಗ್ನಿ, ಗಾರ್ಹಪತ್ಯದಿಂದ ತೆಗೆದುಕೊಳ್ಳಲ್ಪಟ್ಟಿದೆಯಾದುದರಿಂದ ಪ್ರಾಣವು ಆಹವನೀಯಾಗ್ನಿ.[೨]

['ಇವನಲ್ಲಿ ಯಾವುವು ಎಚ್ಚತ್ತಿರುವುವು?'' ಎಂಬ ಪ್ರಶ್ನೆಗೆ ಈ ಉತ್ತರವನ್ನು ಹೇಳಿದೆ.

೧ ಪ್ರಾಣಾಪಾನಾದಿರೂಪವಾದ ಅಗ್ನಿಗಳು

೨ ಇಲ್ಲಿ ಉಪಾಸನೆಗೋಸ್ಕರ ನಿದ್ರೆಯಲ್ಲಿ ಎಚ್ಚತ್ತಿರುವ ಪಂಚಪ್ರಾಣಗಳು ಉಚ್ಛ್ವಾಸ ನಿಃಶ್ವಾಸ ಮತ್ತು ಮನಸ್ಸು—ಇವುಗಳೊಂದಿಗೆ ಅಗ್ನಿಹೋತ್ರದ ಸಂಪತ್ತಿಯನ್ನು ತೋರಿಸಿದೆ: ಮನಸ್ಸೇ ಈ ಅಗ್ನಿಹೋತ್ರದ ಯಜಮಾನ. ಮೂಲಾಧಾರದಲ್ಲಿರುವುದರಿಂದ ಅಪಾನವೇ ಗಾರ್ಹಪತ್ಯ. ಅದರ ಸಮೀಪದಲ್ಲಿರುವ ವ್ಯಾನವೇ ದಕ್ಷಿಣಾಗ್ನಿ. ಅಪಾನವಾಯುವನ್ನೇ ಮೂಲವಾಗಿ ಉಳ್ಳ ಪ್ರಾಣವು ಆಹವನೀಯ. ಉಚ್ಛ್ವಾಸನಿಃಶ್ವಾಸಗಳೇ ಎರಡು ಆಹುತಿಗಳು.]

೪. ಉಚ್ಛ್ವಾಸನಿಃಶ್ವಾಸಗಳೆಂಬ ಈ ಆಹುತಿಗಳನ್ನು ಸಮನಾಗಿ ಮಾಡುವುದರಿಂದ ಅದು ಸಮಾನವು,[೧] ಮನಸ್ಸೇ ಯಜಮಾನನು; ಯಾಗ ಫಲವೇ ಉದಾನವು.[೨] ಅದು ಈ ಯಜಮಾನನನ್ನು ಪ್ರತಿದಿನವೂ ಬ್ರಹ್ಮದ ಬಳಿಗೆ ಕರೆದುಕೊಂಡು ಹೋಗುತ್ತದೆ.[೩]

[೧ ಇದು ಈ ಅಗ್ನಿಹೋತ್ರದ ಅಧ್ವರ್ಯು.

೨ ಇದು ಯಜಮಾನನನ್ನು ಲೋಕಾಂತರಕ್ಕೆ ಒಯ್ಯುವುದರಿಂದ ಉದಾನವೆಂದು ಹೇಳಲ್ಪಟ್ಟಿದೆ. ಈ ರೀತಿ ಪಿಪ್ಪಲಾದನು ಅಗ್ನಿಹೋತ್ರಕ್ಕೆ ಎಂಟು ಅವಯವಗಳಾದ ಯಜಮಾನ ಮೂರು ಅಗ್ನಿಗಳು ಎರಡು ಆಹುತಿಗಳು ಅಧ್ವರ್ಯು ಕರ್ಮಫಲ—ಇವುಗಳನ್ನು ಪಂಚಪ್ರಾಣಗಳು ಉಚ್ಛ್ವಾಸ ನಿಃಶ್ವಾಸಗಳು ಮನಸ್ಸು ಎಂಬ ಎಂಟು ವಸ್ತುಗಳಿಗೆ ಹೋಲಿಸಿರುತ್ತಾನೆ

೩ ಸಾಮಾನ್ಯವಾಗಿ ಬ್ರಹ್ಮಗಮನವು ಜೀವಪರವಾಗಿದ್ದರೂ ಇಲ್ಲಿ ಮನಸ್ಸಿಗೆ ಗಮನತ್ವವನ್ನು ಹೇಳಿದೆ. ಮನಸ್ಸು ಪುರೀತತ್ ಎಂಬ ನಾಡಿಯನ್ನು ಪ್ರವೇಶಿಸುವುದೆಂದು ಹೇಳಿರುವುದರಿಂದ ಅದರಲ್ಲಿರುವ ಬ್ರಹ್ಮದ ಬಳಿಗೆ ಕರೆದುಕೊಂಡು ಹೋಗಲ್ಪಡುತ್ತದೆ ಎಂಬುದು ಯುಕ್ತವೇ.]

೫. ಈ ದೇವನು[೧] (ತನ್ನ) ಸ್ವಪ್ನದಲ್ಲಿ ಮಹಿಮೆಯನ್ನು[೨] ಅನುಭವಿಸುತ್ತಾನೆ: (ಏಕೆಂದರೆ) ಯಾವುದನ್ನು ನೋಡಿದ್ದಾನೆಯೊ ಅದನ್ನೇ ನೋಡುತ್ತಾನೆ,[೩] ಯಾವುದನ್ನು ಕೇಳಿದ್ದಾನೆಯೊ ಅದನ್ನೇ ಕೇಳುತ್ತಾನೆ, ಯಾವುದನ್ನು ಬೇರೆಬೇರೆ ದೇಶಗಳಲ್ಲಿಯೂ ದಿಕ್ಕುಗಳಲ್ಲಿಯೂ ಅನುಭವಿಸಿದ್ದಾನೆಯೊ

ಅದನ್ನೇ ಪುನಃ ಪುನಃ ಅನುಭವಿಸುತ್ತಾನೆ.[೪] ಅವನು ಎಲ್ಲವೂ[೫] ಆಗಿರುವುದರಿಂದ, ನೋಡಿದ್ದು ನೋಡದಿರುವುದು, ಕೇಳಿದ್ದು ಕೇಳದಿರುವುದು, ಅನುಭವಿಸಿದ್ದು ಅನುಭವಿಸದಿರುವುದು, ಇರುವುದು ಇಲ್ಲದಿರುವುದು—ಇವೆಲ್ಲವನ್ನೂ ನೋಡುತ್ತಾನೆ.[೬]

['ಈ ದೇವನು ಎಂತಹವನಾಗಿ ಸ್ವಪ್ನಗಳನ್ನು ನೋಡುತ್ತಾನೆ?' ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳಿದೆ.

೧ ಜೀವಾತ್ಮನು.

೨ ಆನೆ ಕುದುರೆ ಇವೇ ಮೊದಲಾದುವುಗಳನ್ನು ಹೊಂದಿದ ಮಹಿಮೆಯುಳ್ಳವನಾಗಿ.

೩ ಜಾಗ್ರತಾವಸ್ಥೆಯಲ್ಲಿ ನೋಡಿದ್ದನ್ನು ಪುನಃ ಸ್ವಪ್ನದಲ್ಲಿ ನೋಡುತ್ತಾನೆ.

೪ ನೋಡಿದ್ದನ್ನೇ ಕೇಳಿದ್ದನ್ನೇ ಅನುಭವಿಸಬೇಕೆಂಬ ನಿಯಮವಿಲ್ಲ. ಕೆಲವು ಸಮಯದಲ್ಲಿ ಹಿಂದೆ ಅನುಭವವಾಗದುದನ್ನೇ ಅನುಭವಿಸುತ್ತೇವೆ. ಉದಾಹರಣೆ: ಸ್ವಶರೀರಚ್ಛೇದ.

೫ ನೋಡುವವನು ಕೇಳುವವನು ಮಾತನಾಡುವವನು ಹೋಗುವವನು—ಇವೆಲ್ಲ ಒಬ್ಬನೇ ಆಗಿ ನೋಡುತ್ತಾನೆ ಎಂದರ್ಥ.

೬ ಜಾಗ್ರತಾವಸ್ಥೆಯಲ್ಲಿ ಕೆಲಸಮಾಡುವ ಕರ್ಮೇಂದ್ರಿಯಜ್ಞಾನೇಂದ್ರಿಯಗಳು ನಿದ್ರೆಯಲ್ಲಿ ಉಪರತಿಯನ್ನು ಹೊಂದಿದ್ದರೂ ಸ್ವಪ್ನದಲ್ಲಿ ಈಶ್ವರನು ಸೃಷ್ಟಿಸಿದ ಶರೀರೇಂದ್ರಿಯಗಳ ದ್ವಾರಾ ನೋಡುವಿಕೆಯೇ ಮೊದಲಾದುವನ್ನು ಜೀವಾತ್ಮನು ಅನುಭವಿಸುತ್ತಾನೆ.]

೬. ಅವನು ಯಾವಾಗ ತೇಜಸ್ಸಿನೊಂದಿಗೆ[೧] ಸೇರುತ್ತಾನೆಯೊ[೨] ಆಗ ಈ ದೇವನು ಕನಸುಗಳನ್ನು ನೋಡುವುದಿಲ್ಲ.[೩] ಈಗ ಯಾವ ಸುಖವಿರುವುದೊ ಅದು ಈ ಶರೀರದಲ್ಲಿ ಉಂಟಾಗುತ್ತದೆ.[೪]

[೧ ತೇಜಶ್ಶಬ್ದಿತನಾದ ಪರಮಾತ್ಮನೊಂದಿಗೆ.

೨ 'ತೇಜಸಾ ಹಿ ತದಾ ಸಂಪನ್ನೋ ಭವತಿ' ಎಂದು ಶ್ರುತಿಯು (ಛಾ. ಉ. ೮, ೬, ೩) ಹೇಳಿರುವಂತೆ ಪರಮಾತ್ಮನಿಂದ ಆಲಿಂಗಿಸಲ್ಪಡುತ್ತಾನೆ.

೩ ಬ್ರಹ್ಮನೊಂದಿಗೆ ಕೂಡದೆ ಇರುವಾಗ, ಪುನಸ್ಸೊಂದೇ ಉಳಿದಿರುವಾಗ ಪುರುಷನು ಕನಸುಗಳನ್ನು ನೋಡುತ್ತಾನೆ

೪ 'ಯಾವ ಕಾರಣದಿಂದ ಈ ಸುಖವು ಉಂಟಾಗುತ್ತದೆ?' ಎಂಬುದಕ್ಕೆ ಉತ್ತರ: ಶರೀರವಿಲ್ಲದಿರುವಾಗ ಪ್ರಿಯಾಪ್ರಿಯಗಳು ಮುಟ್ಟುವುದಿಲ್ಲ ಎಂದು ಶ್ರುತಿಯು (ಛಾ. ಉ. ೮, ೧೨, ೧) ಹೇಳಿರುವಂತೆ ಶರೀರವೇ ವೈಷಯಿಕಸುಖಕ್ಕೆ ಕಾರಣವು.]

೭. ಎಲೈ ಸೋಮ್ಯ, ಪಕ್ಷಿಗಳು ತಾವು ವಾಸಮಾಡುವ ವೃಕ್ಷವನ್ನು ಸೇರಿಕೊಳ್ಳುವಂತೆ ಅದೆಲ್ಲವೂ ಪರಮಾತ್ಮನಲ್ಲಿ ಪ್ರತಿಷ್ಠಿತವಾಗುವುದು.

['ಯಾರಲ್ಲಿ ಈ ಎಲ್ಲವೂ ಪ್ರತಿಷ್ಠಿತವಾಗಿರುವುದು?' ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳಿದೆ.]

೮. ಪೃಥ್ವಿ ಮತ್ತು ಪೃಥ್ವೀಮಾತ್ರೆ,[೧] ನೀರು ಮತ್ತು ಅದರ ಮಾತ್ರೆ, ತೇಜಸ್ಸು ಮತ್ತು ತೇಜೋಮಾತ್ರೆ, ವಾಯು ಮತ್ತು ವಾಯುಮಾತ್ರೆ, ಆಕಾಶ ಮತ್ತು ಆಕಾಶಮಾತ್ರೆ, ಕಣ್ಣು ಮತ್ತು ನೋಡಲ್ಪಡತಕ್ಕದ್ದು, ಕಿವಿ ಮತ್ತು ಕೇಳಲ್ಪಡತಕ್ಕದ್ದು, ಮೂಗು ಮತ್ತು ಮೂಸಲ್ಪಡತಕ್ಕದ್ದು, ನಾಲಗೆ ಮತ್ತು ಸವಿಯಲ್ಪಡತಕ್ಕದ್ದು, ಸ್ಪರ್ಶ ಮತ್ತು ಮುಟ್ಟಲ್ಪಡತಕ್ಕದ್ದು, ವಾಕ್ ಮತ್ತು ಮಾತನಾಡಲ್ಪಡತಕ್ಕದ್ದು, ಹಸ್ತಗಳು ಮತ್ತು ಹಿಡಿಯಲ್ಪಡತಕ್ಕದ್ದು, ಉಪಸ್ಥ ಮತ್ತು ಆನಂದಿಸತಕ್ಕದ್ದು, ಪಾಯು ಮತ್ತು ವಿಸರ್ಜಿಸತಕ್ಕದ್ದು, ಪಾದಗಳು ಮತ್ತು ಗಂತವ್ಯಸ್ಥಾನ, ಮನಸ್ಸು ಮತ್ತು ಮಂತವ್ಯವಿಷಯ, ಬುದ್ಧಿ ಮತ್ತು ಬೋದ್ಧವ್ಯವಿಷಯ, ಅಹಂಕಾರ ಮತ್ತು ಅದರ ವಿಷಯ, ಚಿತ್ತ ಮತ್ತು ಯೋಚಿಸಲ್ಪಡತಕ್ಕದ್ದು, ಪ್ರಕಾಶ ಮತ್ತು ಪ್ರಕಾಶಿಸಲ್ಪಡತಕ್ಕದ್ದು, ಪ್ರಾಣ ಮತ್ತು ಧರಿಸಲ್ಪಡತಕ್ಕದ್ದು.

[ಹಿಂದಿನ ಮಂತ್ರದಲ್ಲಿ 'ತತ್ಸರ್ವಂ' ಎಂಬ ಪದದ ವಿವರಣೆಯನ್ನು ಇಲ್ಲಿ ಕೊಟ್ಟಿದೆ.
[೧] ಇಲ್ಲಿ ಪೃಥ್ವೀಮಾತ್ರೆ ಎಂದರೆ ಪುರಾಣಗಳಲ್ಲಿ ಗಂಧತನ್ಮಾತ್ರೆ ಎಂದು ಹೇಳಲ್ಪಟ್ಟಿರುವ ಪೃಥ್ವಿಯ ಪೂರ್ವಾವಸ್ಥೆ. ಹೀಗೆಯೇ ಮುಂದೆ ಬರುವ ಪ್ರತಿಯೊಂದು ಮಾತ್ರೆ ಎಂಬ ಪದಕ್ಕೂ ಅರ್ಥವನ್ನು ಕಲ್ಪಿಸಬೇಕು.]

೯. ಇವನೇ[೧] ನೋಡುವವನೂ ಮುಟ್ಟುವವನೂ ಕೇಳುವವನೂ ಮೂಸುವವನೂ ಆಸ್ವಾದಿಸುವವನೂ ಮನನಮಾಡುವವನೂ ತಿಳಿಯುವವನೂ ಕರ್ತೃವೂ ವಿಜ್ಞಾನಾತ್ಮನಾದ ಪುರುಷನೂ (ಆಗಿರುತ್ತಾನೆ). ಇವನು ಪರಮವೂ ಅಕ್ಷಯವೂ ಆದ ಆತ್ಮನಲ್ಲಿ ನೆಲಸುತ್ತಾನೆ.

[[೧] ಚೇತನಾಚೇತನರೂಪವಾದ ಕರ್ತೃ-ಕರಣ-ಕರ್ಮರೂಪವಾದ ಸಮಸ್ತ ಜಗತ್ತು ಪರಮಾತ್ಮನನ್ನೇ ಆಶ್ರಯಿಸಿದೆ ಎಂದು ಭಾವ.]

೧೦. ಯಾವನು ನೆರಳಿಲ್ಲದ[೧] ಶರೀರವಿಲ್ಲದ ಲೋಹಿತವಲ್ಲದ[೨] ಶುಭ್ರನೂ[೩] ಅಕ್ಷರನೂ ಆದ (ಪರಮಾತ್ಮನನ್ನು) ತಿಳಿದುಕೊಳ್ಳುವನೊ ಅವನು,

ಎಲೈ ಸೋಮ್ಯ, ಪರಮಾಕ್ಷರವನ್ನು ಹೊಂದಿ ಸರ್ವಜ್ಞನಾಗುವನು ಮತ್ತು ಎಲ್ಲ ಬಯಕೆಗಳನ್ನು ಹೊಂದುವನು. ಈ ವಿಷಯದಲ್ಲಿ ಈ ಮಂತ್ರವುಂಟು:

[೧ ಜ್ಞಾನಸಂಕೋಚಮಾಡುವ ಕರ್ಮಕ್ಕೆ 'ನೆರಳು' ಎಂದು ಹೇಳಿದೆ. 'ನೆರಳಿಲ್ಲದ' ಎಂದರೆ ಪಾಪವಿಲ್ಲದ ಎಂದರ್ಥ

೨ ವರ್ಣರಹಿತನಾದ.

೩ ಸ್ವಪ್ರಕಾಶನಾದ.]

೧೧. ಎಲೈ ಸೋಮ್ಯ, ಎಲ್ಲ ಇಂದ್ರಿಯಗಳೊಂದಿಗೆ ವಿಜ್ಞಾನಾತ್ಮ[೧] ಪ್ರಾಣಗಳು[೨] ಮತ್ತು ಭೂತಗಳು[೩] ನೆಲಸುವ ಆ ಅಕ್ಷರವನ್ನು ಯಾವನು ತಿಳಿದುಕೊಳ್ಳುವನೊ ಆ ಸರ್ವಜ್ಞನು ಸರ್ವವನ್ನೂ ಪ್ರವೇಶಿಸುವನು.[೪]

[೧ ಜೀವಾತ್ಮ.

೨ ಮುಖ್ಯಪ್ರಾಣ.

೩ ಮಹಾಭೂತಗಳು.

೪ 'ಸರ್ವೇಷು ಲೋಕೇಷು ಕಾಮಚಾರೋ ಭವತಿ' (ಛಾ ಉ. ೭, ೧೫, ೨) ಎಂದು ಶ್ರುತಿಯು ಹೇಳಿರುವಂತೆ ತಾನು ಇಚ್ಛಿಸುವ ಸರ್ವಲೋಕಗಳಲ್ಲಿಯೂ ಸಂಚರಿಸಲು ಸಮರ್ಥನಾಗುತ್ತಾನೆ.]

# ಐದನೆಯ ಪ್ರಶ್ನೆ

೧. ಅನಂತರ ಶೈಬ್ಯ ಸತ್ಯಕಾಮನು ಇವನನ್ನು ಪ್ರಶ್ನಿಸಿದನು: ಎಲೈ ಭಗವಂತನೆ, ಮನುಷ್ಯರಲ್ಲಿ ಯಾವನು ಮರಣದ ವರೆಗೂ ಓಂಕಾರವನ್ನು ಅಭಿಧ್ಯಾನಿಸುವನೊ ಅವನು ಅದರಿಂದ ಯಾವ ಲೋಕವನ್ನು ಹೊಂದುತ್ತಾನೆ? ಪಿಪ್ಪಲಾದನು ಅವನಿಗೆ ಹೇಳಿದನು:

೨. ಎಲೈ ಸತ್ಯಕಾಮ, ಓಂಕಾರವೇ ಪರಬ್ರಹ್ಮವೂ ಅಪರಬ್ರಹ್ಮವೂ[1] ಆಗಿದೆ. ಆದುದರಿಂದ ತಿಳಿದವನು ಇದರಿಂದಲೇ[2] ಇವೆರಡರಲ್ಲಿ ಒಂದನ್ನು ಅನುಸರಿಸುತ್ತಾನೆ.

[[1] ಕಾರ್ಯಬ್ರಹ್ಮ. ವೇದಾಂತಸೂತ್ರಗಳು ೧, ೩, ೧೨ ನೋಡಿ.
[2] ಓಂಕಾರರೂಪವಾದ ಮಾರ್ಗದಿಂದಲೇ.]

೩. ಅವನು ಒಂದು ಮಾತ್ರೆಯನ್ನು[1] ಧ್ಯಾನಿಸಿದರೆ ಅದರಿಂದಲೇ ಅಸ್ತಿತ್ವವನ್ನು[2] ಪಡೆದವನಾಗಿ ಜಗತ್ತಿನಲ್ಲಿ ಕೂಡಲೇ ಶ್ರೇಷ್ಠತೆಯನ್ನು ಹೊಂದುತ್ತಾನೆ. ಋಕ್ಕುಗಳು ಅವನನ್ನು ಮನುಷ್ಯಲೋಕಕ್ಕೆ ಸೇರಿಸುತ್ತವೆ. ಅಲ್ಲಿ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ಕೂಡಿದವನಾಗಿ ಮಹಿಮೆಯನ್ನು[3] ಅನುಭವಿಸುತ್ತಾನೆ.

[[1] ಇಲ್ಲಿ ಮಾತ್ರೆ ಎಂದರೆ ಪ್ರಣವದ ಅಕಾರಾದಿ ಮಾತ್ರೆಯನ್ನು ಸೂಚಿಸುವುದಿಲ್ಲ, ಕ್ಷಣವನ್ನು ಸೂಚಿಸುತ್ತದೆ 'ಅಪರಬ್ರಹ್ಮವಾಚಕವಾದ ಹ್ರಸ್ವಪ್ರಣವದಿಂದ ಅಪರ ಬ್ರಹ್ಮವನ್ನು ಧ್ಯಾನಿಸಿದರೆ' ಎಂದರ್ಥ. ಏ ಓ ಐ ಔ (ಪಾಣಿನಿಯ 'ಏಚ್') ಇವುಗಳಿಗೆ ಹ್ರಸ್ವವಿಲ್ಲದಿದ್ದರೂ ವ್ಯವಹಾರದಲ್ಲಿ ಹ್ರಸ್ವಪ್ರಯೋಗವು ಕಂಡುಬರುವುದರಿಂದ ಓಂಕಾರದ ಹ್ರಸ್ವತ್ವವನ್ನು ಸಾಧಿಸಬಹುದು
[2] ಸಂವೇದಿತಃ = ಲಬ್ಧಸತ್ತಾಕಃ
[3] ಶ್ರೇಯಃಸಾಧಕವಾದ ಬ್ರಹ್ಮೋಪಾಸನೆಯನ್ನು ಅನುಷ್ಠಿಸುತ್ತಾರೆ.]

೪. ಅನಂತರ ಎರಡು ಮಾತ್ರೆಗಳುಳ್ಳ (ಅಪರಬ್ರಹ್ಮವಾಚಕವಾದ ಪ್ರಣವದಿಂದ) ಯಾರ ಮನಸ್ಸಿನಲ್ಲಿ (ಅಪರಬ್ರಹ್ಮಧ್ಯಾನವು) ಉಂಟಾಗುತ್ತದೆಯೊ ಅವನು ಯಜುಸ್ಸುಗಳಿಂದ ಅಂತರಿಕ್ಷದಲ್ಲಿರುವ[1] ಸೋಮಲೋಕಕ್ಕೆ

ಒಯ್ಯಲ್ಪಡುತ್ತಾನೆ ಅವನು ಸೋಮಲೋಕದಲ್ಲಿ ವಿಭೂತಿಯನ್ನು ಅನುಭವಿಸಿ ಪುನಃ (ಪುಣ್ಯಕ್ಷಯವಾದ ಮೇಲೆ) ಹಿಂತಿರುಗುತ್ತಾನೆ.

[೧ ಅಪರಬ್ರಹ್ಮವು ಐಹಿಕ ಆಮುಷ್ಮಿಕವೆಂದು ಎರಡು ವಿಧ; ಒಂದು ಮಾತ್ರೆಯುಳ್ಳ ಪ್ರಣವವನ್ನು ಧ್ಯಾನಿಸುವವರು ಐಹಿಕವಾದ ಮನುಷ್ಯಲೋಕವನ್ನು ಹೊಂದುತ್ತಾರೆ. ಎರಡು ಮಾತ್ರೆಗಳುಳ್ಳ ಪ್ರಣವವನ್ನು ಧ್ಯಾನಿಸುವವರು ಅಂತರಿಕ್ಷಶಬ್ದದಿಂದ ಉಪಲಕ್ಷಿತವಾದ ಆಮುಷ್ಮಿಕಫಲವನ್ನು ಹೊಂದುತ್ತಾರೆ.]

೫. ಆದರೆ ಯಾವನು ಮೂರು ಮಾತ್ರೆಗಳುಳ್ಳ ಓಂ ಎಂಬ ಅಕ್ಷರದಿಂದಲೇ ಪರಮಪುರುಷನನ್ನು ಧ್ಯಾನಿಸುವನೊ ಅವನು ತೇಜೋಮಂಡಲದಲ್ಲಿರುವ ಸೂರ್ಯನನ್ನು ಸೇರಿ, ಸರ್ಪವು ಪರೆಯಿಂದ ಹೊರಗೆ ಬರುವಂತೆ ಪಾಪದಿಂದ ಬಿಡುಗಡೆಯನ್ನು ಹೊಂದಿ, ಸಾಮಗಳ ಮೂಲಕ ಬ್ರಹ್ಮಲೋಕಕ್ಕೆ[೧] ಒಯ್ಯಲ್ಪಡುತ್ತಾನೆ ಅವನು ಈ ಸಂಸಾರಿಮಂಡಲದಲ್ಲಿ[೨] ಇರುವವರಿಗಿಂತ ಶ್ರೇಷ್ಠರಾದ ಪರಿಶುದ್ಧಾತ್ಮರಿಗಿಂತ ಶ್ರೇಷ್ಠನಾದ ಮತ್ತು ಎಲ್ಲ ಶರೀರಗಳಲ್ಲಿರುವ[೩] ಪರಮಪುರುಷನನ್ನು[೪] ನೋಡುತ್ತಾನೆ.

[೧ ಭಗವಲ್ಲೋಕವಾದ ವೈಕುಂಠ.

೨ ಕರ್ಮನಿಮಿತ್ತದಿಂದ ದೇಹವನ್ನು ಹೊಂದಿದವರಿಗೆ ಜೀವಘನರೆಂದು ಈಕ್ಷತಿ-ಕರ್ಮಾಧಿಕರಣ ಭಾಷ್ಯದಲ್ಲಿ (೧, ೩, ೧೨) ಹೇಳಿದೆ.

೩ ಎಲ್ಲ ಪ್ರಾಣಿಗಳ ಅಂತರಾತ್ಮನಾಗಿ.

೪ 'ಭಗವಾನಿತಿ ಶಬ್ದೋऽಯಂ ತಥಾ ಪುರುಷ ಇತ್ಯಪಿ ।
ನಿರುಪಾಧೀ ಚ ವರ್ತೇತೇ ವಾಸುದೇವೇ ಸನಾತನೇ ॥'

ಎಂದು ಹೇಳಿರುವಂತೆ ನಿರುಪಾಧಿಕ-ಪುರುಷಶಬ್ದ-ವಾಚ್ಯನೂ ಭಗವಂತನೂ ಆದ ವಾಸುದೇವನನ್ನು ನೋಡುತ್ತಾನೆ.]

೬. ಈ ಮೂರು ಮಾತ್ರೆಗಳನ್ನು ಅನ್ಯೋನ್ಯಸಕ್ತವಾಗಿಯೂ[೧] ಅಥವಾ ವಿಳಂಬವಾಗಿಯೂ[೨] ಉಚ್ಚರಿಸಿದರೆ ಇವು ಮೃತ್ಯುವನ್ನು ತರುವುವು. ಹೊರಗಿನ[೩] ಒಳಗಿನ[೪] ಮಧ್ಯದ[೫] ಕ್ರಿಯೆಗಳಲ್ಲಿರುವ (ಮಾತ್ರೆಗಳನ್ನು) ಚೆನ್ನಾಗಿ[೬] ಉಚ್ಚರಿಸಿದರೆ ಆ ಪ್ರಯೋಗವನ್ನು ತಿಳಿದವನು ಕಂಪಿಸುವುದಿಲ್ಲ.[೭]

[೧ ಅತ್ಯಂತ ದ್ರುತವಾದ ಉಚ್ಚಾರಣೆಯಿಂದ.

೨ ಅತಿ ವಿಪ್ರಕೃಷ್ಟವಾದ ಕಾಲದಿಂದ ಅತ್ಯಂತ ವಿಪ್ರಯುಕ್ತವಾಗಿ.

[೩] ಯಾಗಾದಿ ಬಾಹ್ಯಕ್ರಿಯೆಗಳು.
[೪] ಮಾನಸಕ್ರಿಯೆಗಳು.
[೫] ವಾಚಿಕವಾದ ಜಪಾದಿಗಳು.
[೬] ಅತ್ಯಂತ ಸಂಯೋಗವಿಲ್ಲದೆ ಅಥವಾ ವಿಪ್ರಯೋಗವಿಲ್ಲದೆ.
[೭] ಫಲವನ್ನು ಕಳೆದುಕೊಳ್ಳುವುದಿಲ್ಲ.]

೭. ಋಕ್ಕುಗಳಿಂದ ಈ ಲೋಕವನ್ನೂ, ಯಜುಸ್ಸುಗಳಿಂದ ಅಂತರಿಕ್ಷವನ್ನೂ, ಸಾಮಗಳಿಂದ ಕವಿಗಳು ನೋಡುವ ಲೋಕವನ್ನೂ,[೧] ಮತ್ತು ಶಾಂತವು[೨] ಅಜರವು[೩] ಅಮೃತವು ಅಭಯವು ಪರವು[೪] ಆದುದನ್ನೂ ಜ್ಞಾನಿಯು ಓಂಕಾರದಿಂದಲೇ ಹೊಂದುತ್ತಾನೆ.

[[೧] 'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ' ಎಂದು ಹೇಳಿರುವಂತೆ.

[೨] ಕಾಮಕ್ರೋಧಲೋಭಮೋಹಮದಮಾತ್ಸರ್ಯಗಳು ಎಂಬ ಊರ್ಮಿಷಟ್ಕ ರಹಿತವಾದ.

[೩] ಜರಾಮರಣಶೂನ್ಯವಾದ.

[೪] ಎಲ್ಲಕ್ಕೂ ಕಾರಣವಾಗಿರುವುದರಿಂದ ಸರ್ವೋತ್ಕೃಷ್ಟವಾದ ಬ್ರಹ್ಮ.]

# ಆರನೆಯ ಪ್ರಶ್ನೆ

೧. ಅನಂತರ ಸುಕೇಶ ಭಾರದ್ವಾಜನು ಪಿಪ್ಪಲಾದನನ್ನು ಪ್ರಶ್ನಿಸಿದನು. ಹೇ ಭಗವಂತನೆ, ಕೋಸಲದೇಶದ ರಾಜಪುತ್ರನಾದ ಹಿರಣ್ಯನಾಭನು ನನ್ನ ಬಳಿಗೆ ಬಂದು ಈ ಪ್ರಶ್ನೆಯನ್ನು ಕೇಳಿದನು: 'ಭಾರದ್ವಾಜ, ಹದಿನಾರು ಕಲೆಗಳುಳ್ಳ[೧] ಪುರುಷನನ್ನು ನೀನು ತಿಳಿದಿರುವೆಯಾ?' ನಾನು ಆ ಕುಮಾರನಿಗೆ ಹೇಳಿದೆನು—'ನಾನು ಇವನನ್ನು ತಿಳಿದಿಲ್ಲ. ನಾನು ಇವನನ್ನು ತಿಳಿದಿದ್ದರೆ ನಿನಗೆ ಹೇಳದೆ ಹೇಗೆ ಇರುತಿದ್ದೆನು? ಯಾವನು ಅನೃತವನ್ನು ಹೇಳುವನೊ ಅವನು ಬೇರು ಸಹಿತ ಒಣಗಿಹೋಗುವನು.[೨] ಆದುದರಿಂದ ಅನೃತವನ್ನು ನಾನು ಹೇಳುವುದಿಲ್ಲ.' ಅವನು ಮಾತನಾಡದೆ[೩] ರಥವನ್ನೇರಿ ಹೊರಟು ಹೋದನು. ಅವನ ವಿಷಯವಾಗಿ ನಿನ್ನನ್ನು ಕೇಳುತಿದ್ದೇನೆ: ಆ ಪುರುಷನು ಎಲ್ಲಿರುವನು?[೪]

[೧ 'ಪ್ರಾಣ'ದಿಂದ ಆರಂಭಿಸಿ 'ನಾಮ'ದ ವರೆಗೆ.

೨ ಶ್ರೇಯಸ್ಸಿಗೆ ಕಾರಣವಾದ ಪುಣ್ಯವೆಲ್ಲವೂ ನಾಶವಾಗುತ್ತದೆ.

೩ ಪ್ರಶ್ನೆಯು ಪ್ರಯೋಜನವನ್ನು ಹೊಂದದೆ.

೪ ಆ ಪುರುಷನು ಇರುವ ಸ್ಥಾನದ ದ್ವಾರಾ ಅವನು ಜೀವನೊ ಪರಮಾತ್ಮನೊ ಎಂದು ನಿರ್ಣಯಿಸಲು ಈ ಪ್ರಶ್ನೆಯು ಹಾಕಲ್ಪಟ್ಟಿದೆ ]

೨. ಪಿಪ್ಪಲಾದನು ಅವನಿಗೆ ಹೇಳಿದನು: ಎಲೈ ಸೋಮ್ಯ, ಯಾವನಿಗೆ ಈ ಹದಿನಾರು ಕಲೆಗಳು ಉಪಕಾರವನ್ನು ಮಾಡಬಲ್ಲವೊ[೧] ಆ ಪುರುಷನು ಈ ಶರೀರದಲ್ಲಿ (ಇರುತ್ತಾನೆ).

[೧ 'ತಮ್ಮ ಸಂಸರ್ಗದಿಂದ ಸುಖದುಃಖಾದಿಗಳನ್ನು ಉಂಟುಮಾಡಲು ಶಕ್ತವೊ' ಎಂದರ್ಥ. ಷೋಡಶಕಲೆಗಳುಳ್ಳವನೆಂದರೆ ಷೋಡಶಕಲೆಗಳ ಭೋಕ್ತೃತ್ವ ಎಂದರ್ಥ; ಅದು ಜೀವನಿಗೆ ಸೇರಿದುದು ]

೩. ಅವನು ಆಲೋಚಿಸಿದನು:[೧] ಯಾವನು ಉತ್ಕ್ರಮಿಸಿದರೆ ನಾನು ಉತ್ಕ್ರಮಿಸುವೆನು? ಯಾವನು ಪ್ರತಿಷ್ಠಿತನಾದರೆ ನಾನು ಪ್ರತಿಷ್ಠಿತನಾಗುವೆನು?

[ತನ್ನ ಉಪಕಾರಕ್ಕಾಗಿ ಜೀವನು ಪ್ರಾಣಾದಿಗಳನ್ನು ಸೃಷ್ಟಿಸುವುದರಿಂದ ಅವುಗಳ ಭೋಕ್ತೃತ್ವವು ಅವನಿಗೆ ಸಂಭವಿಸುತ್ತದೆ. ಪರಮಾತ್ಮನಿಗೆ ಪ್ರಾಣಾದಿಗಳ ಉಪಕಾರವು

ಬೇಕಿಲ್ಲವಾದುದರಿಂದ ಅವನಿಗೆ ಷೋಡಶಕಲಾಭೋಕ್ತೃತ್ವವಿಲ್ಲ. ಭಗವಂತನೇ ಸ್ವಯಂ ಗೀತೆಯಲ್ಲಿ ಹೇಳಿದ್ದಾನೆ: 'ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ । ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥' (೯, ೯) ಮತ್ತು 'ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।' (೪, ೧೪).

[೧] ಸೋಽಧ್ಯಕ್ಷೇ ತದುಪಗಮಾದಿಭ್ಯಃ (ವೇ. ಸೂ ೪, ೨, ೪) ಎಂಬ ಸೂತ್ರದ ಮೇಲೆ ವ್ಯಾಖ್ಯಾನಮಾಡುವಾಗ ಭಾಷ್ಯಕಾರರು ಹೇಳಿರುವಂತೆ ಈ ವಾಕ್ಯವು ಜೀವಾತ್ಮನ ಅಭಿಸಂಧಿಪ್ರಕಾರವನ್ನು ತಿಳಿಸುತ್ತದೆ.]

೪. ಆ ಜೀವಾತ್ಮನು (ಹೀಗೆ ಆಲೋಚಿಸಿ) ಪ್ರಾಣನನ್ನು[೧] ಸೃಷ್ಟಿಸಿದನು. ಪ್ರಾಣನಿಂದ ಶ್ರದ್ಧೆ[೨] ಆಕಾಶ[೩] ವಾಯು ಜ್ಯೋತಿ ನೀರು ಪೃಥ್ವಿ ಇಂದ್ರಿಯ[೪] ಮನಸ್ಸು ಅನ್ನ[೫]—(ಇವುಗಳನ್ನೂ), ಅನ್ನದಿಂದ ವೀರ್ಯ[೬] ತಪಸ್ಸು[೭] ಮಂತ್ರಗಳು[೮] ಕರ್ಮ[೯] ಲೋಕಗಳು[೧೦]—(ಇವುಗಳನ್ನೂ), ಮತ್ತು ಲೋಕಗಳಲ್ಲಿ ನಾಮವನ್ನೂ[೧೧] (ಸೃಷ್ಟಿಸಿದನು).[೧೨]

[೧ ಯಾವನ ಉತ್ಕ್ರಾಂತಿ ಮತ್ತು ಪ್ರತಿಷ್ಠೆಗಳು ತನ್ನ ಉತ್ಕ್ರಾಂತಿಪ್ರತಿಷ್ಠೆಗಳನ್ನು ಅನುಸರಿಸುವುವೊ ಅಂತಹ ಮುಖ್ಯಪ್ರಾಣನನ್ನು ಸೃಷ್ಟಿಸಿದನು.

೨ ಆಸ್ತಿಕ್ಯಬುದ್ಧಿ.

೩ ಪಂಚಮಹಾಭೂತಗಳು.

೪ ವಾಗಾದಿ ಇಂದ್ರಿಯಗಳು.

೫ ವ್ರೀಹ್ಯಾದಿರೂಪವಾದ ಅನ್ನ.

೬ ಅನ್ನವನ್ನು ಆಶ್ರಯಿಸಿರುವ ಶರೀರೇಂದ್ರಿಯಸಾಮರ್ಥ್ಯ.

೭ ಶರೀರಶೋಷಣಾದಿರೂಪವುಳ್ಳ ತಪಸ್ಸು.

೮ ಋಗ್ಯಜುಸ್ಸಾಮಾದಿ ಮಂತ್ರಗಳು.

೯ ಜ್ಯೋತಿಷ್ಟೋಮಾದಿ ಕರ್ಮಗಳು.

೧೦ ಸ್ವರ್ಗಾದಿ ಲೋಕಗಳು.

೧೧ ಸ್ವರ್ಗಾದಿ ಹೆಸರುಗಳು

೧೨ ಷೋಡಶಕಲೆಗಳ ಸೃಷ್ಟಿಯು ಪರಮಾತ್ಮನಿಗೆ ಸೇರಿದ್ದರೂ ಜೀವಾತ್ಮನಿಗೂ ಅವುಗಳ ಸ್ರಷ್ಟೃತ್ವವನ್ನು ಹೇಳಿದೆ; ಏಕೆಂದರೆ ಅವನು ಈ ಸೃಷ್ಟಿಯ ಕಾರಣವಾದ ಅದೃಷ್ಟಫಲವನ್ನು ಆರಂಭಿಸುವ ಕರ್ಮಕ್ಕೆ ಕರ್ತೃವಾಗಿರುತ್ತಾನೆ. ಆದುದರಿಂದ ಷೋಡಶಕಲೆಗಳ ಕಾರಣವಾದ ಅದೃಷ್ಟವನ್ನು ಆರಂಭಿಸುವ ಕರ್ಮಗಳನ್ನು ಮಾಡಿ, ತನ್ನ ಭೋಗೋಪಕಾರಿಗಳಾದ ಷೋಡಶಕಲೆಗಳನ್ನು ಸೃಷ್ಟಿಸುವನು. ಜೀವಾತ್ಮನು ಹೀಗೆ ಅವುಗಳ ಭೋಕ್ತೃವಾದುದರಿಂದ ಷೋಡಶಕಲೆಗಳು ಅವನಿಗೇ ಸೇರಿದ್ದು.]

೫. ಸಮುದ್ರಾಭಿಮುಖವಾಗಿ[೧] ಹರಿಯುತ್ತಿರುವ ನದಿಗಳು ಸಮುದ್ರವನ್ನು ಸೇರಿ ಹೇಗೆ ಅದೃಶ್ಯವಾಗುವುವೊ,[೨] ಅವುಗಳ ನಾಮರೂಪಗಳು (ಹೇಗೆ) ನಾಶವಾಗುವುವೊ ಮತ್ತು (ಅವು) ಸಮುದ್ರವೆಂದೇ (ಹೇಗೆ) ಹೇಳಲ್ಪಡುವುವೊ, ಹಾಗೆಯೇ ಈ ಜೀವನ ಪುರುಷನನ್ನೇ ಹೊಂದಬೇಕಾಗಿರುವ ಹದಿನಾರು ಕಲೆಗಳು[೩] ಪುರುಷನನ್ನು[೪] ಹೊಂದಿ ವಿಲೀನವಾಗುವುವು.[೫] ಇವುಗಳ ನಾಮರೂಪಗಳು ನಾಶವಾಗುವುವು ಮತ್ತು (ಇದೆಲ್ಲವೂ) ಪುರುಷನೆಂದೇ ಹೇಳಲ್ಪಡುತ್ತದೆ[೬] ಈ ಪುರುಷನು ಕಲಾಶೂನ್ಯನು[೭] ಮತ್ತು ಅಮೃತನು.[೮] ಈ ವಿಷಯದಲ್ಲಿ ಈ ಮಂತ್ರವಿದೆ:

[ಪರಮಾತ್ಮನು ಕಲಾಶೂನ್ಯನಾದುದರಿಂದ ಅದರ ಮೂಲಕ ಅವನನ್ನು ಮುಮುಕ್ಷುವು ತಿಳಿಯಬೇಕೆಂದು ಆಚಾರ್ಯನು ಉಪದೇಶಿಸುತ್ತಾನೆ.

[೧] ಆಧಾರವೆಂಬ ಅರ್ಥವನ್ನು ಸೂಚಿಸುವ ಅಯನ-ಶಬ್ದವು ರೂಪವನ್ನು ತಿಳಿಸುತ್ತದೆ; ಎಂದರೆ ಸಮುದ್ರರೂಪವಾದುದು; ಸಮುದ್ರದೊಂದಿಗೆ ಒಂದಾಗಲು ಯೋಗ್ಯವಾದುದು ಎಂದರ್ಥ.

[೨] ನದಿಗಳು ಸಮುದ್ರವನ್ನು ಸೇರಿದ ಮೇಲೆ ಸಮುದ್ರದಲ್ಲಿ ವೃದ್ಧ್ಯಾದಿರೂಪವಾದ ವಿಕಾರವನ್ನು ಉಂಟುಮಾಡಲಾರವು. ಹಿಂದೆ ತಾವು ಹೊಂದಿದ್ದ ಗಂಗಾ ಯಮುನಾ ಇವೇ ಮೊದಲಾದ ಹೆಸರುಗಳನ್ನೂ, ಬಿಳಿ ಕಪ್ಪು ಮೊದಲಾದ ಬಣ್ಣಗಳನ್ನೂ ಕಳೆದುಕೊಳ್ಳುತ್ತವೆ, ಹೊಸ ಹೆಸರನ್ನೂ ಹೊಸ ರೂಪವನ್ನೂ ಹೊಂದುತ್ತವೆ ಎಂದರ್ಥ: ಸಮುದ್ರ ಇತ್ಯೇವಂ ಪ್ರೋಚ್ಯತೇ.

[೩] ಭೋಗಕ್ಕೆ ಉಪಕರಣವಾದ.

[೪] ನಿರುಪಾಧಿಕಪುರುಷಶಬ್ದವಾಚ್ಯನಾದ ವಾಸುದೇವನನ್ನು.

[೫] ಕತ್ತಿಯನ್ನು ಕಲ್ಲಿನ ಮೇಲೆ ಹೊಡೆದರೆ ಅದು ಹೇಗೆ ಮೊಂಡಾಗುತ್ತದೆಯೊ, ಹಾಗೆಯೇ ಈ ಕಲೆಗಳು ಜೀವನಿಗೆ ಭೋಗವನ್ನು ಉಂಟುಮಾಡಲು ಸಮರ್ಥವಾಗಲಾರವು. ಏಕೆಂದರೆ ಇವುಗಳು ತಮ್ಮ ಸ್ವರೂಪಸ್ಥಿತಿಪ್ರವೃತ್ತಿಗಳಿಗೆ ಪುರುಷನನ್ನೇ ಅವಲಂಬಿಸಬೇಕಾಗುತ್ತದೆ. ಜೀವನಿಗೆ ಭೋಗ್ಯ-ಭೋಗಸ್ಥಾನ-ಭೋಗೋಪಕರಣತ್ವಾದಿಗಳನ್ನು ಉಂಟುಮಾಡುವಂತೆ ಪುರುಷನಿಗೆ ಉಂಟುಮಾಡಲಾರವು.

[೬] ಪುರುಷನನ್ನು ಬಿಟ್ಟರೆ ಇವುಗಳಿಗೆ ಬೇರೆ ಸ್ಥಿತಿಯೇ ಮೊದಲಾದುವು ಇಲ್ಲದಿರುವುದರಿಂದ ಪುರುಷನೆಂದೇ ಹೇಳಲ್ಪಡುತ್ತವೆ.

[೭] ಪರಮಾತ್ಮನಿಗೆ ಕಲೆಗಳ ಭೋಕ್ತೃತ್ವವಿಲ್ಲದಿರುವುದರಿಂದ.

[೮] ಕಲಾಶೂನ್ಯನಾದುದರಿಂದಲೇ ಅಮೃತನು; ಏಕೆಂದರೆ ಭೋಕ್ತೃತ್ವರೂಪವಾದ ಕಲೆಗಳ ಸಂಬಂಧದಿಂದಲೇ ಮರಣವುಂಟಾಗುವುದು.]

೬. ರಥಚಕ್ರದ ಗುಂಬದಲ್ಲಿ (ಸೇರಿರುವ) ಅರೆಯ ಕಾಲುಗಳಂತೆ ಯಾವನಲ್ಲಿ ಕಲೆಗಳು ಪ್ರತಿಷ್ಠಿತವಾಗಿರುವುವೊ ವೇದ್ಯನಾದ ಆ ಪುರುಷನನ್ನು ತಿಳಿದುಕೊಳ್ಳಬೇಕು. ಮೃತ್ಯುವು ನಿಮ್ಮನ್ನು[೧] ವ್ಯಥೆಗೊಳಿಸದಿರಲಿ.

[೧ ಬ್ರಹ್ಮಜ್ಞಾನಿಗಳಾದ ನಿಮ್ಮನ್ನು.]

೭. ಪಿಪ್ಪಲಾದನು ಅವರೆಲ್ಲರಿಗೂ ಹೇಳಿದನು: ಈ ಪರಬ್ರಹ್ಮನನ್ನು ನಾನು ಇಷ್ಟೇ ತಿಳಿದಿರುವೆನು. ಇದಕ್ಕಿಂತ ಶ್ರೇಷ್ಠವಾದುದು (ಯಾವುದೂ) ಇಲ್ಲ.

೮. ಅವರು ಅವನನ್ನು ಅರ್ಚಿಸಿ ಹೇಳಿದರು: ನಮ್ಮ ಅವಿದ್ಯೆಯ ಆಚೆಯ ದಡಕ್ಕೆ ದಾಟಿಸುವ ನೀನೇ ನಮ್ಮ ತಂದೆ.[೧]

ಪರಮ ಋಷಿಗಳಿಗೆ ನಮಸ್ಕಾರ.

ಪರಮ ಋಷಿಗಳಿಗೆ ನಮಸ್ಕಾರ.

[೧ ಸಂಸಾರವೆಂಬ ಸಮುದ್ರದ ಆಚೆಯ ದಡಕ್ಕೆ ದಾಟಿಸುವುದರಿಂದ ನೀನೇ ನಮ್ಮ ತಂದೆ. ನೀನು ವಿದ್ಯಾದಾತನಾದುದರಿಂದ ನೀನು ಕೊಟ್ಟ ಜನ್ಮವೇ ಶ್ರೇಷ್ಠವಾದುದು.]

# ಮಂತ್ರಗಳ ಅಕಾರಾದಿ ಸೂಚಿ